



## ಮುಂದೆ ಒಂದು ದಿನ ...

ಮುಂದೆ ಒಂದು ದಿನ
ಬಾಳೆ ಕತ್ತರಿಸಿ ಎಸೆದಂತೆ
ಕಟ್ಟಡಗಳ ನೆಲಸಮಗೊಳಿಸಿ
ಕೆರೆಕಟ್ಟೆಗಳನ್ನಾಗಿಸಿ
ಮಳೆನೀರ ತುಂಬಿಡುವರು
ಹೊಂಡ ಗುಂಡಿ ಗಿಂಡಿ ಎನದೆ
ನೀರ ತುಂಬಿಡುವರು

ಬಾಳೆ ಕತ್ತರಿಸಿ ಎಸೆದಂತೆ
ಕಟ್ಟಡಗಳ ಕಿತ್ತೆಸೆದು
ಭತ್ತ ರಾಗಿ ಜೋಳ
ಹೂವು ಹಣ್ಣು ಬೆಳೆವರು

ಬಯಲಲ್ಲಿ ಬಿಸಿಲಿಗೆ ಮೈಯೊಡ್ಡಿ
ಬದುಕು ಮಾಡುವರು
ರಾತ್ರಿ ಚಂದ್ರನ ಹೊದ್ದು ಕನಸು ಕಾಣುವರು!

ಸಾಗರಗಳು ಸಾವಿರ ಇದ್ದರೂ
ಸಲಹದಿದ್ದರೆ ಸುಡುಗಾಡು

# ದಿನದ ಪ್ರಾರ್ಥನೆ

ಕವಿತೆಗಳು

ಸವಿತಾ ನಾಗಭೂಷಣ

ನುಡಿ
ಎಚ್.ಐ.ಜಿ ೫, ಕಲ್ಲಳ್ಳಿ, ವಿನೋಬ ನಗರ
ಶಿವಮೊಗ್ಗ – ೫೭೭೨೦೪
ದೂ : ೯೪೮೧೩. ೫೧೦೭೮

ದಿನದ ಪ್ರಾರ್ಥನೆ : ಕವಿತೆಗಳು
ಸವಿತಾ ನಾಗಭೂಷಣ
'ನುಡಿ' ಎಚ್.ಐ.ಜಿ 5, ಕಲ್ಲಳ್ಳಿ
ವಿನೋಬ ನಗರ, ಶಿವಮೊಗ್ಗ – 577 204
ದೂ: 94813 51079

**Dinada Prarthane**
(KANNADA)
A Collection of Poems
Savitha Nagabhushana
'NUDI' HIG-5, Kallahalli
Vinobhanagar, Shivamogga - 577204
Mobile 94813 51079

| | | |
|---|---|---|
| Published by | : | Author |
| First Impression | : | 2024 |
| Copyright | : | Author |
| Pages | : | 88 |
| Size | : | 1/8 Demmy |
| Cover Design | : | Sudhakar Darbe |

| | | |
|---|---|---|
| **ಬೆಲೆ** | : | **ರೂ.60/-** |

| | | |
|---|---|---|
| ಅಕ್ಷರ ಜೋಡಣೆ | : | ಆರ್. ದಿಲೀಪ್ ಕುಮಾರ್ |
| ಪುಟ ವಿನ್ಯಾಸ | : | ರಾಜಾ ಸಿರಿಗೆರೆ |
| ಒಳಪುಟದ ರೇಖಾ ಚಿತ್ರಗಳು | : | ಹಜರತ್ ಅಲಿ |
| ಮುಖಪುಟ ವಿನ್ಯಾಸ | : | ಸುಧಾಕರ ದರ್ಬೆ |

# ಕೊನೆಯ ಆಸೆ

**ಮ**ಳೆ ಮಳೆ ಎಂದು ಎಲ್ಲಾ ಹುಯ್ಲಿಡುತ್ತಿರುವಾಗ ಬರಲೋ ಬೇಡವೋ ಎಂಬಂತೆ ಗುಡುಗು ಮಿಂಚು ಸಿಡಿಲಿನ ಜೊತೆ ಮೊದಲ ಮಳೆ ಬಂತು. ನಾಕೇ ನಾಕು ಹನಿ ಎರಚಿ ಓಡಿ ಹೋಯಿತು! ಮೂರನೆಯ ದಿನಕ್ಕೆ ತೋಟದಲ್ಲಿ ಲಿಲ್ಲಿ ಹೂವು ಅರಳಿತ್ತು. ಅಚ್ಚ ಬಿಳಿಯ ಹೂವು. ಆರು ಬಿಳಿಯ ದಳಗಳು ನಡುವೆ ಆರು ಹಳದಿ ಕೇಸರಗಳು. ಒಂದೇ ಒಂದು ಹೂವು. ಮುದ್ದಾದ ಹೂವನ್ನು ನೋಡುತ್ತಾ "ಒಬ್ಬಳೇ ಹೀಗೆ ಎಂತಕ್ಕೆ ಬಂದೆ?" ಎಂದು ಕೇಳಿದೆ. ಅದು ಹಾಗೇ ಗಾಳಿಗೆ ತುಯ್ದಾಡಿತು. 'ಒಂದು ತುರ್ತು ಕರೆ ಇತ್ತು, ಬಂದೆ' ಎಂದು ಹೇಳಿದ ಹಾಗೆ ನನಗೆ ಕೇಳಿಸಿತು'. ಮಳೆ ಬಂದರೆ ಮಾತ್ರ ನೀನು ಬರುವುದು, ಅರಳುವುದು... ನಾನು ಎಷ್ಟು ನೀರು ಎರೆದರೂ ಅಷ್ಟೇ... ಜಂಭ ನಿನಗೆ' ಎಂದು ಮೂದಲಿಸಿದರೂ ನಾಕು ಹನಿ ನೀರೂಡಿಸಿ ದಾಸವಾಳದ ಹತ್ತಿರ ಮಾತಿಗೆ ನಿಂತೆ... ನಂದಬಟ್ಟಲ ಹೂವಿನ ಪಕಳೆಗಳು ನೆಲದ ಮೇಲೆ ಬಿದ್ದಿದ್ದವು. ಇರುವೆಗಳು ಏನೋ ಕಾರುಬಾರು ನಡೆಸಿದ್ದವು! ಅದೇನೆಂದು ತಗ್ಗಿ ಬಗ್ಗಿ ನೋಡಿದರೆ... ಕಾಲು ಮುರಿದುಕೊಂಡು ಒಂದು ಜೇನುಹುಳು ಬಿದ್ದಿತ್ತು. ಇರುವೆಗಳು ಸುತ್ತುವರೆದಿದ್ದವು. ಜೇನು ತನ್ನ ಪುಟ್ಟ ರೆಕ್ಕೆ ಬೀಸಿ ಹಾರಲು ಯತ್ನಿಸುತಿತ್ತು. ನಾನು ಒಂದು ಒಣಗಿದ ಎಲೆ ಅದರತ್ತ ಚಾಚಿದೆ. ಅದು ನಿಧಾನವಾಗಿ ಅದರ ಮೇಲೆ ಜರುಗಿತು. ನಾನು

ನಿಧಾನವಾಗಿ ಆ ಎಲೆಯನ್ನು ಲಿಲ್ಲಿ ಹೂವಿನತ್ತ ಒಯ್ದು ಕೇಸರದತ್ತ ಜೇನು ಹುಳುವನ್ನು ದಾಟಿಸಿದೆ. ಜೇನು ಹಳದಿ ಕೇಸರವನ್ನು ತನ್ನ ಕೈಗಳಿಂದ ತಬ್ಬಿತು.

ಎರಡೇ ಕ್ಷಣ... ಕಳಚಿಕೊಂಡು ಮಣ್ಣಿಗೆ ಪಟಕ್ಕನೆ ಬಿದ್ದಿತು.

ನಾನು ಹೂವನ್ನೇ ನೋಡುತ್ತಾ ನಿಂತೆ ಮತ್ತೂ ಕಿವಿಗೊಟ್ಟೆ. 'ಕೆಲಸ ಮುಗಿಯಿತು, ಇನ್ನೆರಡೇ ದಿನ... ನನಗೂ ಹೊರಡಲಿಕ್ಕೆ ಉಂಟು' ಎಂದು ಹೂವು ಪಿಸುಗುಟ್ಟಿದಂತೆನಿಸಿತು!

**ಮತ್ತೂ ಕಿವಿಗೊಟ್ಟೆ...**

**ಏನೋ ಕಳವಳ ತಳಮಳ!**

**– ಸವಿತಾ ನಾಗಭೂಷಣ**

# ಕೃತಜ್ಞತೆಗಳು

- ಕವನಗಳ ಮೊದಲ ಓದುಗರಾದ ಜೀವನ ಸಂಗಾತಿ ಡಿ. ಎಸ್. ನಾಗಭೂಷಣ ಅವರಿಗೆ.
- ಸದಾ ಒಳ್ಳೆಯ ಮಾತುಗಳನ್ನಾಡಿ ಪ್ರೋತ್ಸಾಹಿಸುವ ನನ್ನೆಲ್ಲ ಗೆಳೆಯ ಗೆಳತಿಯರಿಗೆ.
- ಪತ್ರಿಕೆಗಳಲ್ಲಿ, ಫೇಸ್‌ಬುಕ್, ವಾಟ್ಸಾಪ್‌ಗಳಲ್ಲಿ ಓದಿ ಮಿಡಿದ ಅಸಂಖ್ಯ ಓದುಗರಿಗೆ. ಬಂಧು ಬಳಗಕ್ಕೆ,
- ಇಲ್ಲಿನ ಎಲ್ಲ ಕವನಗಳನ್ನು ಬಿಡಿಬಿಡಿಯಾಗಿ ಪ್ರಕಟಿಸಿದ ಪ್ರಜಾವಾಣಿ, ಉದಯವಾಣಿ, ವಿಜಯ ಕರ್ನಾಟಕ, ಸಂಯುಕ್ತ ಕರ್ನಾಟಕ, ವಾರ್ತಾ ಭಾರತಿ, ತರಂಗ, ಮಯೂರ, ಹೊಸ ಮನುಷ್ಯ ಇನ್ನಿತರ ಪತ್ರಿಕೆಗಳಿಗೆ.
- ಒಪ್ಪವಾಗಿ ಬೆರಳಚ್ಚಿಸಿ ಮುದ್ರಣಕ್ಕೆ ಅಣಿ ಮಾಡಿಕೊಟ್ಟ ಕಿರಿಯ ಕವಿಮಿತ್ರ ಚಾಮರಾಜನಗರದ ಆರ್. ದಿಲೀಪ್ ಕುಮಾರ್ ಅವರಿಗೆ,
- ಮುಖಪುಟ ವಿನ್ಯಾಸ ಮಾಡಿಕೊಟ್ಟ ಶ್ರೀಯುತ ಸುಧಾಕರ ದರ್ಬೆ ಅವರಿಗೆ,
- ಪುಟ ವಿನ್ಯಾಸ ಮಾಡಿದ ರಾಜಾ ಸಿರಿಗೆರೆ ಅವರಿಗೆ,
- ಈ ಸಂಕಲನ ಹೊರತರಲು ನೆರವಾದ ಹಿರಿಯ ಸಮಾಜವಾದಿ ಮಿತ್ರರಾದ ಶ್ರೀ ಸಿ. ಚನ್ನಬಸವಣ್ಣ ಅವರಿಗೆ,

- ಕವಿತೆಗಳಿಗೆ ಅಂದವಾದ ಚಿತ್ರಗಳನ್ನು ಬರೆದುಕೊಟ್ಟ ಕಲಾವಿದ ಹಜರತ್ ಅಲಿ ಅವರಿಗೆ,
- ಅಂದವಾಗಿ ಮುದ್ರಿಸಿಕೊಟ್ಟಿರುವ ಬೆಂಗಳೂರಿನ ವಿಶ್ವಾಸ್ ಪ್ರಿಂಟ್ಸ್ ಮಾಲೀಕರಿಗೆ ಮತ್ತು ಅವರ ಸಿಬ್ಬಂದಿ ವರ್ಗಕ್ಕೆ,

ನನ್ನ ಕೃತಜ್ಞತೆಗಳು ಸಲ್ಲುತ್ತವೆ.

**– ಸವಿತಾ ನಾಗಭೂಷಣ**

# ಜಗತ್ ಕಾವ್ಯವೆಲ್ಲ ಒಂದೇ*

**ನಿಮ್ಮ ಬಹಳಷ್ಟು ಕವನಗಳಿಗೆ ಪ್ರಕೃತಿಯೇ ವಸ್ತು. ಹೇಗಿದು? ಮಲೆನಾಡಿನವರಾದ ಕಾರಣವಾ?**

ನಮ್ಮ ಪೂರ್ವಿಕರು ಘಟ್ಟದ ಕೆಳಗಿನವರು. ನಮ್ಮ ತಂದೆ ಅಲ್ಲಿನ ಸೆಕೆ ತಡೆಯಲಾರದೆ ಘಟ್ಟ ಹತ್ತಿದವರು. ನಾನು ಕಣ್ಣು ಬಿಟ್ಟಿದ್ದು ಚಿಕ್ಕಮಗಳೂರಿನಲ್ಲಿ. ಶಿವಮೊಗ್ಗೆಗೆ ಬಂದಾಗ ಆರು ತಿಂಗಳ ಮಗು. ಗಿಡ, ಮರ ಗುರುತಿಸುವಷ್ಟು ತಿಳಿವು ಮೂಡಿದಾಗ ಜಯನಗರದ ಬಾಡಿಗೆ ಮನೆಯಲ್ಲಿದ್ದೆವು. ಊರ ತುದಿಗಿದ್ದ ನಮ್ಮ ಮನೆಯ ಮುಂದೆ ಆ ಹೊತ್ತು ಯಾವ ಮನೆಯೂ ಇರಲಿಲ್ಲ. ರಾಗಿಗುಡ್ಡ ಎಂದು ಕರೆಯುವ ಗುಡ್ಡಗಳ ಸಾಲು, ಅದರ ಬುಡದಲ್ಲಿ ಓಡುವ ರೈಲು, ಸೂರ್ಯೋದಯ, ಕಾಳ್ಗಿಚ್ಚು, ಕಾಮನಬಿಲ್ಲು, ಅದರ ಬುಡದಲ್ಲಿ ಹರಿಯುತ್ತಿದ್ದ ನೀರಕಾಲುವೆಗಳು, ಹೊನ್ನಾವರಿಕೆ ಹೂವಿನ ಪೊದೆಗಳು, ನೆಲದ ಮೇಲೆ ಹಾಸಿಕೊಂಡಂತಿದ್ದ ನೀಲಿ ಹೂವುಗಳು, ತೇರಿನ ಹೂವುಗಳು, ನಮ್ಮ ಮನೆಯ ಬೀದಿಯ ತುದಿಯಲ್ಲಿದ್ದ ರಾಮಮಂದಿರದಲ್ಲಿ ದೇವರಿಗೆ ಮಾಡುತ್ತಿದ್ದ ಹೂವಿನ ಅಲಂಕಾರಗಳು ಇವೇ ನನ್ನ ಪ್ರಪಂಚವನ್ನು ಹಿಗ್ಗಿಸಿದ್ದು. ಪ್ರಾಥಮಿಕ ಶಾಲೆಗೆ ಹೋಗುವ ದಾರಿಯಲ್ಲೂ ಪ್ರತಿ ಮನೆಯ ಆವರಣದಲ್ಲಿಯೂ ಹೂವೇ ಹೂವು! ಆ ಹೊತ್ತು ಕಾಂಪೌಂಡುಗಳು ಕಡಿಮೆ. ಹಸಿರು ಬೇಲಿ, ಅದರಲ್ಲೂ ನಕ್ಷತ್ರದಂತಹ ಹೂವುಗಳು... ಚರ್ಮದ ಅಲರ್ಜಿ ಕಾಯಿಲೆಯಿಂದ ಸದಾ ಬಳಲುತ್ತಿದ್ದ ಬೆನ್ನ ಹಿಂದೆ ಹುಟ್ಟಿದ ತಮ್ಮನ ಅಳು ಒಂದೇ ಸಮನೆ ಕಿವಿಯಲ್ಲಿ

ಗುಂಯ್‌ಗುಟ್ಟುತ್ತಿದ್ದುದರಿಂದ ನಾನು ಆ ನೋವಿನಿಂದ ಬಿಡುಗಡೆ ಪಡೆಯಲು ಗಿಡಮರ ಗುಡ್ಡಗಳಲ್ಲಿ ಕಳೆದುಹೋದೆ. ಹೀಗೆ ಕಂಡ ಹಸಿರೆಲ್ಲಾ ಎದೆಯಲ್ಲಿ ನಟ್ಟಿಹೋಯಿತು. 'ಪ್ರಕೃತಿ'ಯೇ ವಸ್ತುವಾಗಲು ಇದೇ ಕಾರಣ ಅನಿಸುತ್ತದೆ...

**ನವಿರುತನ ಮತ್ತು ಪ್ರಬುದ್ಧತೆ ಎರಡರ ಅಪೂರ್ವ ಕಾಂಬಿನೇಷನ್ ನಿಮ್ಮ ಕವನ. ಕಾವ್ಯ ಅಂದರೆ ನಿಮಗೇನು?**

ಸಂಗೀತ, ನರ್ತನ, ಶಿಲ್ಪಕಲೆ, ಪೇಂಟಿಂಗ್ ಎಲ್ಲಾ ಲಲಿತಕಲೆಗಳು ಕಾವ್ಯವೇ... ಕಾವ್ಯ ಎಂಬುದು 'ಹೃದಯದ ಭಾವಾಭಿನಯ' ಎಳವೆಯಲ್ಲಿ ಕಿವಿಗೆ ಬೀಳುತ್ತಿದ್ದ ಹಳೆಯ ಕನ್ನಡ – ಹಿಂದಿ ಚಲನಚಿತ್ರ ಗೀತೆಗಳು, ಅಕಾಶವಾಣಿಯಲ್ಲಿ ಬಿತ್ತರಗೊಳ್ಳುತ್ತಿದ್ದ ಜನಪದ –ಭಾವಗೀತೆಗಳು – ದಾಸರ ಪದಗಳು – ತತ್ವಪದಗಳು – ವಚನಗಳು ಭಾಷೆಯನ್ನು ಹೇಗೆ ಬಳಸಬೇಕು ಎಂದು ಕಲಿಸಿದವು. ಏನು ಬರೆದರೂ ಅದು ಜಗತ್ತಿನಿಂದ ಪಡೆದದ್ದು. ಏನು ಪಡೆದೆನೋ ಅದನ್ನೇ ನೀಡಿರುವೆ. ಕಾವ್ಯ ಎಂದರೆ ಏನು ಅಂತ ನಿಜವಾಗಿಯೂ ನನಗೆ ಸ್ಪಷ್ಟತೆ ಇಲ್ಲ. ಇದು ನಾನು ಜಗತ್ತಿನ ವಿದ್ಯಮಾನಕ್ಕೆ ನನ್ನ ಮಿತಿಯಲ್ಲಿ ನೀಡಿರುವ ಒಂದು ಪ್ರತಿಕ್ರಿಯೆ ಮಾತ್ರ!

**ಪ್ರಕೃತಿಯೂ, ಹೆಣ್ಣೂ ನಿಮ್ಮ ಕಾವ್ಯದಲ್ಲಿ ಸಮಾನವಾಗಿ ಬರುತ್ತವೆ. ಎರಡೂ ಪರಸ್ಪರ ಸಂವಾದಿಯಾಗಿ ನಿಮಗೆ ಕಾಣಿಸಿವೆಯೇ?**

ಪ್ರಕೃತಿಯನ್ನು ಅಳತೆ, ಅಂದಾಜು ಮಾಡಲು ಸಾಧ್ಯವಿಲ್ಲ. ಅದು ಏನು ಅಂತಾನೇ ಗೊತ್ತಾಗ್ತಾ ಇಲ್ಲ. 'ಹೆಣ್ಣು' ಅನ್ನುವುದು ಕೂಡ ಅದರ ವಿಸ್ತಾರದಲ್ಲಿ ಒಂದು ಬಿಂದು. ಪ್ರಕೃತಿ ಒಂದು ಸಾಗರ ಇದ್ದ ಹಾಗೆ. 'ಹೆಣ್ಣು' (ನಾನು) ಅದರೊಳಗಿರುವ ಮೀನು ಅಂತ ಇಟ್ಕೊಳ್ಳಿ... ಸಾಗರದಾಚೆ ಕೂಡ ಎಷ್ಟು ಲೋಕ ಇದಾವೆ... ನಿಗೂಢ – ವಿಸ್ಮಯ. ಈ ಬರವಣಿಗೆ ಇತ್ಯಾದಿ ಎಲ್ಲವೂ ಪ್ರಕೃತಿಯನ್ನು ಅರಿಯುವ, ನನ್ನನ್ನೇ ನಾನು ಅರಿಯುವ ಒಂದು ಲೆಕ್ಕಕ್ಕೇ ಇಲ್ಲದ ನಮ್ರ ಯತ್ನ!

**ನಿಮ್ಮಲ್ಲಿ ಕವನ ಹುಟ್ಟಿದ ಬಗೆ ಹೇಗೆ?**

ಯೋಚಿಸುವುದು, ತಿದ್ದುವುದು, ತೀಡುವುದು... ಇಲ್ಲವೇ ಇಲ್ಲ. ನಾವು ನೋಡಿದ್ದು, ಆಡಿದ್ದು, ಮಾಡಿದ್ದು ಎಲ್ಲವೂ

ನಮ್ಮಲ್ಲಿ ಒಳಗೆ ಉಳಿದುಕೊಂಡು ಬಿಟ್ಟಿರುತ್ತೆ. ಅದು ಯಾವುದೋ ಒಂದು ಕ್ಷಣದಲ್ಲಿ ಜಾಗೃತವಾಗುತ್ತದೆ. ಬರೆಯಲು ಹೆಚ್ಚೆಂದರೆ ಐದು – ಆರು ನಿಮಿಷ ಸಾಕು. ಹೊರಗಿನದೇನೋ ಒಳಗಿನದೇನಕ್ಕೋ ಮುಟ್ಟಬೇಕು... ಅಷ್ಟೆ. ಏನೋ ಒಂದು ಬರಕೋತೀನಿ. ಯಾರು ಏನೆಂದರೆ ನನಗೇನು?

**ನಿಮ್ಮ ಕಾವ್ಯಕ್ಕೆ ಸೂಕ್ತವಾದ 'ವಿಮರ್ಶೆ' ಸಂದಿಲ್ಲ ಎಂದು ನಿಮಗನಿಸುತ್ತದೆಯೇ?**

'ವಿಮರ್ಶೆ' ಮಾಡಲು ಸಾಧ್ಯ ಇಲ್ಲದ ಬರವಣಿಗೆ ಅಂತ ತುಂಬಾ ಜನ ಹೇಳ್ತಾರಪ್ಪ! ಕಾವ್ಯವೆನ್ನುವುದು ಅತೀ ಅಮೂಲ್ಯ ಮತ್ತು ಅಗತ್ಯವಾದ ಅನ್ನದ ಹಾಗೆ. ಹಸಿದೋರು ಉಣ್ಣುವರು ಅಷ್ಟೆ! ಜಗತ್ತಿನಲ್ಲಿ ಎಲ್ಲೆಲ್ಲೊ ಏನೇನೋ ನಡಿತಾ ಇರುತ್ತೆ... ಕಾವ್ಯವೂ ಅದರ ಒಂದು ಭಾಗ. ಜಗತ್ ಕಾವ್ಯವೆಲ್ಲ ಒಂದೇ... ಜಗತ್ತಿನ ಯಾವುದೇ ಮೂಲೆಯ ವ್ಯಕ್ತಿ ಅತ್ತರೆ ಕಣ್ಣಲ್ಲಿ ನೀರು ಬರುವುದೇ ಹೊರತು ರಕ್ತವಲ್ಲವಲ್ಲ! ತುಂಬಾ ಮಹತ್ವದ್ದೂ ಅಲ್ಲ, ಕಿಂಚಿತ್ತೂ ಅಲ್ಲ. ನ್ಯಾಚುರಲ್ – ಸಹಜವಾದದ್ದು. ಹಾಗಾಗಿ ವಿಮರ್ಶೆ ಬಯಸೋದೆ ತಪ್ಪು ಅನಿಸತ್ತೆ.

**ಕವನಗಳಲ್ಲಿ ಕಡಿಮೆ ಮಾತನಾಡುವವರು ನೀವು. ಕಾದಂಬರಿ ಹೇಗೆ ಸಾಧ್ಯವಾಯ್ತು? ನಿಮ್ಮ ಇಷ್ಟದ ಪ್ರಕಾರ?**

ಕವನ ಎಂದರೆ ಒಂದು ಹನಿ. ಒಂದು ಮಿಂಚು, ಅದೊಂದು ಸಾರ. ಕಾದಂಬರಿ ಸಾಗರ ಇದ್ದ ಹಾಗೆ. ಸೂರ್ಯನ ಬೆಳಕಿನಲ್ಲಿ ಪ್ರತಿಯೊಂದೂ ನಿಚ್ಚಳವಾಗಿ ಗೋಚರಿಸುವುದು. ವಿವರವಾಗಿ ಪರಿಶೀಲಿಸಬಹುದು. ಕಾದಂಬರಿಗಳಲ್ಲಿ ಇದು ಸಾಧ್ಯ. ಹೊಳೆದದ್ದು ಕಾವ್ಯವಾಗಿದೆ. ಕೇಳಿಸಿಕೊಂಡಿದ್ದು ಕಾದಂಬರಿಯಾಗಿದೆ. ಏನೋ ಪ್ರಯೋಗಾತ್ಮಕವಾಗಿ "ಸ್ತ್ರೀ ಲೋಕ" ಬರೆದೆ. ಒಂದಿಪ್ಪತ್ತೈದು ಅತಿ ಸಣ್ಣಕತೆಗಳನ್ನು ಬರೆದಿರುವೆ. ಲೇಖನ – ಪ್ರವಾಸ ಕಥನ ಹೀಗೆ ಸಣ್ಣ ಪುಟ್ಟದ್ದು ಬರೆದದ್ದೂ ಇದೆ. ಅವನ್ನೆಲ್ಲ ಪತ್ರಿಕೆಯಲ್ಲಿ ಫೇಸ್‌ಬುಕ್‌ನಲ್ಲಿ ಪ್ರಕಟಿಸಿರುವೆ. ಬರೆದದ್ದನ್ನೆಲ್ಲ ಪುಸ್ತಕ ರೂಪದಲ್ಲಿ ತಂದಿಲ್ಲ. ಪರಿಣಾಮಕಾರಿಯಾಗಿ, ಚುಟುಕಾಗಿ ಹೇಳುವುದು ಒಳ್ಳೆಯದು ಅನಿಸಿದೆ. ಅಂತಹುದನ್ನು ಸಹೃದಯರು

ಕೂಡಲೇ ಸ್ವೀಕರಿಸುವರು. ಕಾವ್ಯದ ಬಗ್ಗೆಯೇ ನನ್ನ ಒಲವು.

**ಸೋಷಿಯಲ್ ಮೀಡಿಯಾ ಹಲವರಿಗೆ ವರ್ಜ್ಯ. ನೀವು ಫೇಸ್‌ಬುಕ್‌ನಲ್ಲಿ ಸಕ್ರಿಯರು. ಡಿಜಿಟಲ್ ಲೋಕ ಖುಷಿ ಕೊಟ್ಟಿದೆಯಾ?**

ಫೇಸ್‌ಬುಕ್‌ನಲ್ಲಿ ನಾನು ಕಡಿಮೆ ಸಂಖ್ಯೆಯ ಜನರನ್ನಷ್ಟೆ ಗೆಳೆಯ, ಗೆಳತಿಯರನ್ನಾಗಿ ಹೊಂದಿರುವೆ. ಇಲ್ಲಿ ಸ್ನೇಹಿತರು ವ್ಯಕ್ತಪಡಿಸುವ ಭಿನ್ನ ಅಭಿಪ್ರಾಯಗಳು, ಅಪರೂಪದ ಸಂಗತಿಗಳು, ವಿಚಾರಗಳು ನನ್ನನ್ನು ತಿದ್ದಿವೆ. ಎಳೆಯ ಮನಸುಗಳನ್ನು ಅರಿಯಲು ಸಹಕಾರಿಯಾಗಿದೆ. ಸಾಮಾನ್ಯ ಜನರು, ಸಣ್ಣ ಪುಟ್ಟ ಸಂಗತಿಗಳೆಲ್ಲ ನನ್ನನ್ನು ಯೋಚನೆಗೆ ಹಚ್ಚುತ್ತವೆ. ಇಷ್ಟವಾಗದಿರುವುದನ್ನು ಹೇಗೆ ಸಹಿಸಬೇಕು ಎಂಬುದನ್ನೂ ಈ ಜಾಲತಾಣ ಕಲಿಸಿಕೊಟ್ಟಿದೆ. ಕೇಡಿಲ್ಲದ ಕಾವ್ಯವನ್ನು ಪ್ರಕಟಿಸಲಂತೂ ಇದು ಅತ್ಯುತ್ತಮ ವೇದಿಕೆ.

**ಅರವತ್ತು ತುಂಬಿದಾಗ 'ಏನೆಲ್ಲಾ ನೋಡಲು ಬದುಕಿರುವೆನಲ್ಲ' ಅಂದಿದ್ದಿರಿ. ಬದುಕಿನ ಬಗ್ಗೆ ಖೇದವಿದೆಯೇ?**

ಕೋವಿಡ್ ಕಾಲದಲ್ಲಿ ಮನುಜನ ಅಮಾನವೀಯ ಟೊಳ್ಳುತನದ ಅನಾವರಣವಾಯಿತು. ಕೋವಿಡ್ ಎಂಬುದು ಪ್ರಭಾವಿಗಳಿಗೆ ಲಾಭಕೋರ ದಂಧೆಯಾಯಿತು. ಲಾಕ್‌ಡೌನ್ ಸಮಯದಲ್ಲಿ ಬಡಜನರು ಗಾಳಿಬೆಳಕಿಲ್ಲದ ಮನೆಗಳಲ್ಲಿ ಬಂಧಿಗಳಾಗಿ, ಅವರಿಗೆ ಊಟಕ್ಕೂ ತತ್ವಾರವಾದರೆ ಅವರು ಹೇಗೆ ಬದುಕು ನಡೆಸಬೇಕು ಎಂಬುದನ್ನು ಯಾರು ಯೋಚಿಸಿದ್ದಾರೆ? ಎಲ್ಲರಿಗೂ ಬದುಕಲು ಯೋಗ್ಯವಾದ ಸೂರು, ಆರೋಗ್ಯ ಕಾಪಾಡಿಕೊಳ್ಳುವಷ್ಟು ಪೌಷ್ಟಿಕ ಆಹಾರ, ಕನಿಷ್ಟ ಶಿಕ್ಷಣ, ನಿಯಮಿತ ಉದ್ಯೋಗ, ಭದ್ರತೆಯ ರಾಜಕೀಯ ವಾತಾವರಣ, ಕಷ್ಟಗಳನ್ನು ಹೇಳಿಕೊಳ್ಳುವಷ್ಟು ಸ್ವಾತಂತ್ರ್ಯ ಇವೆಲ್ಲ ಇಲ್ಲದ ಬದುಕು ಬದುಕೆ? ಕೋವಿಡ್ ಮನುಷ್ಯರು ಹೆಚ್ಚು ದುಷ್ಟರಾಗಲು ಅವಕಾಶ ನೀಡಿತಲ್ಲ. ಇದು ನನ್ನನ್ನು ಘಾಸಿಗೊಳಿಸಿದೆ.

**ಕೋವಿಡ್ ಕಾಲ ನಿಮ್ಮಲ್ಲಿ ಕಾವ್ಯ ಹುಟ್ಟಿಸಿದೆಯಾ?**

ಸುಮ್ಮನೆ ಮನೆಯಂಗಳದಲ್ಲಿ ಕೂತು ಹೊಂಗೆ ಮರ ನೋಡುತ್ತಾ ಕೂರುವುದು. ಹಕ್ಕಿಗಳ ಹಾರಾಟ, ಕೂಗಾಟ

ಈಗ ಜೋರು. ಒಬ್ಬಳೇ ಬಿಕೋ ಎನ್ನುವ ಬೀದಿಗಳಲ್ಲಿ ಓಡಾಡುವ ಆಸೆ. ಆದರೆ ನಿರ್ಬಂಧ. ಲಾಕ್‌ಡೌನ್ ಆದ ಆರಂಭದಲ್ಲಿ ಎಲ್ಲವೂ ಕಷ್ಟ ಎನಿಸುತ್ತಿತ್ತು. ಈಗ ಅದೇ ಚಂದ ಅನಿಸತೊಡಗಿದೆ. ಸಾವಧಾನ, ಸಮಾಧಾನ, ಹಿತಮಿತ ಆಹಾರ ಎಲ್ಲ ಹಿತವೆನಿಸುತ್ತದೆ. ಇಷ್ಟೇ ಸಾಕು ಎನಿಸತೊಡಗಿದೆ. ಕಾವ್ಯ ನನ್ನ ಜೀವವೇ ಆಗಿರುವುದರಿಂದ ಒಮ್ಮೊಮ್ಮೆ ಅದರ ಕರೆಗೆ ಓಗೊಡುವೆ, ಅಷ್ಟೆ.

**ಮುಂದಿನ ಕೃತಿ?**

ಪತ್ರಿಕೆಗಳು, ಪ್ರಕಾಶಕರು ಪ್ರಕಟಿಸದಿದ್ದರೂ, ಪುಸ್ತಕದ ಅಂಗಡಿಗಳಲ್ಲಿ ಕವಿತಾ ಸಂಕಲನಗಳನ್ನು ಇಡಲು ನಿರಾಕರಿಸಿದರೂ, ಕವಿ ಬರೆಯುವುದನ್ನು ನಿಲ್ಲಿಸುವನೆ/ಳೆ? ಹಾಗಾಗಿ ಇದ್ದ ಬದ್ದ ಕವಿತೆಗಳನ್ನು ಒಟ್ಟು ಮಾಡಿ ಒಂದು ಕವನ ಸಂಕಲನ.

---

ವಿದ್ಯಾರಶ್ಮಿ ಪೆಲತ್ತಡ್ಕ ಅವರು 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ನಡೆಸಿದ ಸಂದರ್ಶನ.

# ಪರಿವಿಡಿ



# ಹುಳ

ನಾನೂ ಹುಳ ನೀನೂ ಹುಳ
ಅತಳ ವಿತಳ ಪಾತಾಳ ಹದಿನೆಂಟು
ಲೋಕದೊಳಗ ಹರಿದಾಡುತಾವು ಬಹಳ

ಇಂತವೇ ... ಇವೇ ಬಹಳ
ನೀ ಹುಳ ನಾ ಹುಳ ಎಂಬ ಜಗಳ

ಮೆದ್ದಿರುವೆವು ಕೊಬ್ಬಿರುವೆವು
ಉಬ್ಬಿರುವೆವು ಬಹಳ

ರೆಕ್ಕೆ ಬಲಿಯಬೇಕು ಚಿಟ್ಟೆಯಾಗಬೇಕು
ಹಾರಿ ಹೋಗಬೇಕು ಕರಗಿ ಕಳವಳ

ಅದೇ ಹುಳ
ಇದೀಗ ಸರಳ ವಿರಳ

# ನನ್ನದಲ್ಲ

ಏಣಿ ಹತ್ತಿದರೇನು?
ಮಹಡಿ ಕಟ್ಟಿದರೇನು?

ತಿಜೋರಿ ತುಂಬಿ ತುಳುಕಿ
ದೊರೆಯು ತಾನಾದರೇನು?

ಬಿರುದು ಬಾವಲಿ ನೀಡಿ
ಮಂದಿ ತಲೆದೂಗಿದರೇನು?

ಜಗವ ಬೆಳಗಿದರೇನು?
ಸಗ್ಗವ ಸುತ್ತಿ ಬಂದರೂ ನೀನು

ಕಟ್ಟಕಡೆಯ ದಿನ
ಕೊನೆಗೂ ಅನಿಸಿದ್ದೇನು?

ಒಪ್ಪಿ ನಡೆದೆನೊ?
ತಪ್ಪಿ ನಡೆದೆನೊ?
ನಡೆದ ದಾರಿಯು ನನ್ನದಲ್ಲ!



# ಕಣ್ತುಂಬಿ ನಿಲ್ಲುವೆ

ಥೇಟು ಅಸ್ತಿಪಂಜರಗಳೇ
ಕಸುವಿಲ್ಲವೇ... ಉಸಿರಿಲ್ಲವೇ

ಊಳಿಡುತ್ತಿದೆ ನಾಯಿ
ಗಾಳಿಗೆ ದಿಕ್ಕೆಟ್ಟು ಸೂರು ನಡುಗಿದೆ

ಸಿದ್ದೆ ಮುದ್ದೆಯಾಗಿ ಮಡಕೆಯಲ್ಲಿ
ಉಪ್ಪಿಗಾಗಿ ಕಾದಿದೆ

ಯಾರು ದೀಪ ಹಚ್ಚಬೇಕು?
ಯಾರು ಒಪ್ಪ ಮಾಡಬೇಕ

ಇದೇನಿದು
ಮನೆಯೆ? ಮಸಣವೆ?

ತಪ್ಪುಮಾಡಿದವಳಂತೆ
ಕಣ್ತುಂಬಿ ನಿಲ್ಲುವೆ ...



# ನೀರಿಗಿಳಿಯಬೇಕು

ಮೊದಲು ನೀರಿಗಿಳಿಯಬೇಕು
ಕೈ ಕಾಲು ಬಡಿಯಬೇಕು
ಒದ್ದೆಯಾಗಬೇಕು ಮುದ್ದೆಯಾಗಬೇಕು!

ನೀರಿಗಿಳಿದ ಕೂಡಲೇ ಮೀನಿನ ಗುಣ
ತಾನೇ ಅಂಟಿಕೊಳ್ಳುವುದು
ಈಜು ಸಲೀಸು...
ಪಾತಾಳ ನೀ ಜಾಲಾಡಬಹುದು

ದಡದ ಮೇಲೆ ಕುಂತವರು ಲೆಕ್ಕಾಚಾರ
ಹಾಕಿದ್ದೇ ಹಾಕಿದ್ದು!
ಯಾರು ಏನೆಂದುಕೊಳ್ಳುವರು?
ಕಳವಳ – ತಳಮಳ

ಹೆಜ್ಜೆ ಹಿಂದೇಟು ಹಾಕಿತು
ತಲೆಗೂದಲು ಹಣ್ಣಾಯಿತು
ಕೊನೆಗೂ ಅವರಾಸೆ ಈಡೇರಿತು
ಅಸ್ಥಿ ನದಿಯಲ್ಲಿ ಈಜಾಡಿತು!



# ಮದ್ದುಂಟೆ

ಅರಳಿದ ಹೂ ಬಾಡಬಾರದು
ಮದ್ದುಂಟೆ?
ಮಾಗಿದ ಹಣ್ಣು ಕೊಳೆಯಬಾರದು
ಮದ್ದುಂಟೆ?

ಮಣ್ಣಿನ ಗಡಿಗೆ ಒಡೆಯಬಾರದು
ಮದ್ದುಂಟೆ?
ತೊಗಲಿನ ಉಡುಗೆ ಕೆಡಬಾರದು
ಮದ್ದುಂಟೆ?

ಒಡಲು ಚುರುಚುರು ಎನಬಾರದು
ಮದ್ದುಂಟೆ?
ಗುಡಲು ಥರಥರ ನಡುಗಬಾರದು
ಮದ್ದುಂಟೆ?

ಬೆವರನು ಬಿಸಿಲು ಬಸಿಯಬಾರದು
ಮದ್ದುಂಟೆ?
ನೆಲವನು ನೆತ್ತರು ಸೋಕಬಾರದು
ಮದ್ದುಂಟೆ?

ಕತ್ತಿಯು ಯಾರನು ಕೊಲಬಾರದು
ಮದ್ದುಂಟೆ?
ಬತ್ತಿಯು ಎಂದಿಗೂ ಆರಬಾರದು
ಮದ್ದುಂಟೆ?

ಮದ್ದುಂಟೆ? ಮದ್ದುಂಟೆ?
ಉಂಟೆ? ಉಂಟೆ?

ಮಂದಿ ಹೇಳುವರು
ಮಗಳೆ ಇದು ಮದ್ದಿಲ್ಲದ ಖಾಯಿಲೆ
ದೊಂದಿ ಹೇಳುವುದು
ಹರಿಯೊ ಹೊಳೆ ಉರಿದಿದ್ದು
ಎಲ್ಲಾದ್ರೂ ಉಂಟೆ?

# ಸಾವು

ಎಷ್ಟೋ ವರುಷಗಳಿಂದ ಬೆನ್ನ ಹಿಂದೆಯೇ
ಕಣ್ಣ ಮುಂದೆಯೇ ಇದ್ದರೂ
ಬೆಪ್ಪಗೆ ತೆಪ್ಪಗೆ ಇದ್ದೆ
ಇದ್ದರೆ ಇರು ನನಗೇನು?
ಜತೆಗಿದ್ದರೂ ಒಪ್ಪಿಗೆ ಎಂಬಂತೆ ಇದ್ದೆ!

ಅದೊಂದು ದಿನ ಸಾಕಪ್ಪ ಸಾಕೆನಿಸಿ
'ಬೇಕು' 'ಬೇಕು'ಗಳ ರಾಜ್ಯದಿಂದ ಬಿಡುಗಡೆ
ಬಯಸಿ ಮೈಕೊಡವಿ ಎದ್ದುನಿಂತೆ!

ಥೂ... ಎಷ್ಟು ನೆರಿಗೆ ಮುದುರಿದೆ
ಹಳತಾಗಿದೆ ಹರಿದಿದೆ ಇಷ್ಟು ದಿನ
ನೋಡಲಿಲ್ಲವೇ ಕಳಚಿದೆ

ಆಹಾ! ಆಹಾ! ಆಹಾ!
ಎಂಥಾ ಬಿಸಿಯಪ್ಪುಗೆ ಕೊರೆಯುವ ಮೈಗೆ
ಹೊಸ ಬಟ್ಟೆ! ಅಳತೆ ಸರಿಯಾಗಿದೆ

# ಸೀರೆ

ಹೊಂಬಣ್ಣದ ಕೆಂಬಣ್ಣದ
ಕಡುಗಪ್ಪು ತಿಳಿನೀಲಿ
ಬಿಳಿನೂಲು ನೊರೆ ಹಾಲು
ಬಣ್ಣಬಣ್ಣದ ಸೀರೆ

ಸುಡುಬೆಂಕಿ ಉಡುತಂಪು
ಅಗಣಿತ ತಾರಾಗಣಗಳ
ಮಿಂಚಂಚಿನ ಸೆರಗಿನ ಸೀರೆ

ಹಕ್ಕಿ ಹಾರಿದರೊಂದು
ಚುಕ್ಕಿ ಮಿನುಗಿದರೊಂದು
ರುಜು ಮಾಡಿ ಕಳುಹಿದ
ಚಿತ್ತಾರದ ಸೀರೆ

ಕೇಳದು ಮಗ್ಗದ ಸದ್ದು
ಕಾಣದೆ ಸುಮ್ಮನೆ ಇದ್ದು
ನೇಯ್ದುವನೇ ...

## ಸಂಹಿತೆ

ಹುಟ್ಟುಡುಗೆ ತೊಟ್ಟು ಹಾಯಾಗಿದ್ದೆ
ಚಳಿಗಾಳಿ ಮಳೆ ಬಿಸಿಲಿಗೆ
ಸುಟ್ಟು ಗಟ್ಟಿಮುಟ್ಟಾಗಿದ್ದೆ

ಹೊಚ್ಚಿ ಮುಚ್ಚಿ ಚುಚ್ಚಿ
'ಇಟ್ಟಂಗೆ ಇರು' ಎಂದಿರುವರು
ಉಸಿರು ಕಟ್ಟದಂತೆ
ಕಣ್ಣು ಮೂಗು ಬಿಟ್ಟಿರುವರು !





## ಇಷ್ಟೇ...

ಮರ ಏರಿದೆ ಹಣ್ಣು ಕಿತ್ತು ತಿಂದೆ
ಮರದ ಮೇಲಿಂದಲೇ
ಕಣ್ಣು ಹಾಯಿಸಿ ಕಂಡೆ ತೊರೆ ಕೆರೆ
ಬೊಗಸೆ ನೀರು ಕುಡಿದೆ ಸುಖನಿದ್ರೆ

ಚಳಿಗಾಳಿ ಮಳೆ ಬಿಸಿಲು
ಹೀರಿಕೊಂಡೆ ತೀರಿಕೊಂಡೆ ಹುಗಿದರು
ಮತ್ತದೇ ಮರದ ಕೆಳಗೆ

ಸೇರಿ ಬೇರಿನೊಳಗೆ ಮುಟ್ಟಿ
ಮಾತನಾಡಿಸಿದೆ
ಸಂದಾಯವಾಯಿತು ಋಣ
ನಾನೀಗ ಮಣ್ಣಕಣ



# ಪ್ರೇಮದಲ್ಲಿ ಬಿದ್ದು ನೋಡು

ದೇವರೇ ಪ್ರೇಮಿಗಳಿಗೆ ರೆಕ್ಕಗಳನ್ನು ಕೊಡು
ಯಾರ ಕೈಗೂ ಸಿಗದಂತೆ ಹಾರಲು ಬಿಡು

ರೆಕ್ಕೆ ಸೋತ ಕ್ಷಣದಲ್ಲಿಯೆ ಚಿಟ್ಟೆಯನ್ನಾಗಿಸಿ
ಹಲವು ಬಣ್ಣಗಳ ಹೂಗಳ ತೋಟಗಳಲ್ಲಿ
ಇಳಿಸಿಬಿಡು, ಪರಿಮಳದಲ್ಲಿ ಮಿಂದು
ಮುಳುಗೇಳಲವರು

ಎರಡು ಕ್ಷಣಗಳ ಕಾವು
ಎರಡು ಹುಚ್ಚು ಜೀವಗಳನು
ಜೀವಮಾನವಿಡೀ ಬೆಚ್ಚಗೆ ಇಡಲೇಳು

ಹಾರೈಸುವೆ... ಒಮ್ಮೆ ಪ್ರೇಮದಲ್ಲಿ ಬಿದ್ದು
ನೋಡು
ಒದ್ದಾಡಿದರೂ... ಮಧು ಮಧುರ ಹಾಡು!

# ಆ ಮನೆ... ಈ ಮನೆ...

೧

ಕತ್ತಲು ಕವಿದಿದೆ
ಪರದೆಯು ಇಳಿದಿದೆ
ಕಿಟಕಿಯು ಮುಚ್ಚಿದೆ
ಬಾಗಿಲು ಮುಚ್ಚಿದೆ
ಬೀಗವು ಜಡಿದಿದೆ
ನಾಯಿಯು ಬೊಗಳಿದೆ
ಕಾವಲು ತಡೆದಿದೆ
ನಿಲ್ಲುವೆನು ಹೊರಗೆ...



೨

ತಂಗಾಳಿ ನಾನು
ಕೈಕಾಲು ಬೀಸುತ
ನಡೆವೆ ಓಡುವೆ
ಗುಡಿಸಲು ಇರುವೆಡೆ...

ಅಂಗಳದಲಿ ಮಗು

ನಿದಿರೆಗೆ ಸಂದಿದೆ
ಸಣ್ಣಗೆ ದೀಪ ತಾನೆ ಬೆಳಗಿದೆ
ಬಾಗಿಲು ತೆರೆದಿದೆ
'ಬಾ' ಎಂದು ಕರೆದಿದೆ
ಸುಳಿದಾಡುವೆ ಒಳಗೆ ಹೊರಗೆ

ಜ್ಯೋತಿ ಬೆವರಿರಲು ಬೀಸಿ ಬೀಸಣಿಗೆ
ಹೊತ್ತು ತಂದಿರುವ ಹೂವಿನ ಬುಟ್ಟಿಯ
ಹಟ್ಟಿಯ ಮೂಲೆಗೆ ಇಟ್ಟು ಹೋಗುವೆ



# ಕೀಲುಗೊಂಬೆ

ಇಲ್ಲಿ...
ಮಗು ಹುಟ್ಟಿದ ಕೂಡಲೆ
ಹೆಸರಿಡುವುದರ ಜತೆಗೆ
ಕಿವಿಯಲ್ಲಿ ಉಸುರುವುದು ವಾಡಿಕೆ

ಯಾವ ಧರ್ಮ ಏನು ಕರ್ಮ
ಯಾವ ಜಾತಿ ಯಾವ ದೇವರು
ಯಾವ ಭಾಷೆ
ತಯಾರಾಗುವುದು ನಕಾಶೆ

ಪಾಲಿಸಬೇಕಾದ ಆಚಾರ
ಮಾಡಬೇಕಾದ ವಿಚಾರ
ಓದಬೇಕಾದ ಗ್ರಂಥ
ಉಡುಗೆ – ತೊಡುಗೆ

ಯಾರನ್ನು ಮುಟ್ಟಬಾರದು
ಯಾರನ್ನು ವರಿಸಬಾರದು
ಏನನ್ನು ತಿನ್ನಬಾರದು

ದಾಟಬಾರದ ಗೆರೆ
ಈಜಬಾರದ ಹೊಳೆ
ಮೀರಿದರೆ ಹಾರಿದರೆ ಏನೆಲ್ಲ ಶಿಕ್ಷೆ
ಇತ್ಯಾದಿ ಇತ್ಯಾದಿ...

ಕಿವಿಯಲ್ಲಿ ಉಸುರಿದ್ದು
ಬಸಿರಲ್ಲೇ ಹರಿದಿದ್ದು
ಉಸಿರಲ್ಲಿ ಬೆರೆತಿದ್ದು
ಮಿದುಳಿನಲ್ಲಿ 'ಸೇವ್' ಆಗುತ್ತದೆ
ಮುಂದೆ? ಕೀಲುಗೊಂಬೆ!



# ಪ್ರೇಮ

ಮೊದಲು ಮಿಂಚು
ನಂತರ ಗುಡುಗು ಸಿಡಿಲು

ಪ್ರೇಮವೇ...
ನಿನ್ನದು ಇದೇ ಕತೆ



ಕಣ್ಣ ಮಿಂಚು ಮೊದಲಾಗುವುದು
ಎದೆಯ ಡಂಗುರ
ನಂತರ ನುಡಿಯುವುದು

ಮಿಂದು ದಿವಿನಾಗಿ ಮಳೆಯಲ್ಲಿ
ಮೂಡಿ ಮಳೆಬಿಲ್ಲು
ಪಚ್ಚೆ ಪೈರು ಹಸಿರು ಉಸಿರಾಡಿ
ಚಲಿಸುವುದು ಜೀವಜಗತ್ತು

# ಎಲ್ಲಿರುವೆ ಕವಿಯೇ...

ಮಣ್ಣಾಗುವುದೆಂದರೆ ಇದೇ ಏನು?
ಹೂವಾಗಿ, ಹಕ್ಕಿಯಾಗಿ
ಕಲ್ಲೋ ಹುಲ್ಲೋ ಏನಾಗಿ?
ನವಿಲ ಕಣ್ಣಾಗಿ, ಜಲದ ಕಲಕಲವಾಗಿ
ಏನಾಗಿ? ಎಲ್ಲಿರುವೆ? ಜಗದ ಉಸಿರಲ್ಲಿ
ಮರಳಿ ಯಾರ ಬಸಿರಲ್ಲಿ?
ಹುಡುಕುವೆ ಹುಡುಕುವೆ...
ಕಾಣುವೆನು ಮತ್ತೆ ಮತ್ತೆ
ಜಗದ ಎಲ್ಲ ಕವಿಗಳ
ಎದೆಯ ತಿಳಿಗೊಳದಲ್ಲಿ...



# ಸಂಕಲ್ಪ ಮಾಡು



ಕಲ್ಲು – ಮಣ್ಣು ಗಿಡ ಮರ ಹೂವು ಹಣ್ಣು
ಪಶುಪಕ್ಷಿ ಕ್ರಿಮಿಕೀಟಗಳು
ಸುಮ್ಮನೆ ಬದುಕಿ ಹೋಗುವವು ಅಷ್ಟೆ

ಮಳೆಗಾಳಿ ಗುಡುಗು – ಮಿಂಚು ಬಿಸಿಲು ಚಳಿ
ಸುಮ್ಮನೆ ಬಂದು ಹೋಗುವವು ಅಷ್ಟೆ

ಮಳೆಬಿಲ್ಲು ಬೆಳದಿಂಗಳು ನಕ್ಷತ್ರಗಳು ಸುಮ್ಮನೆ
ಮೂಡಿ ಸುರಿದು ಮಿನುಗಿ ಹೋಗುವವು ಅಷ್ಟೆ

ಮನುಜಾ ನಿನ್ನೊಬ್ಬನದೇ
ಹಾರಾಟ ಚೀರಾಟ ಎಗರಾಟ
ಪರದಾಟ ಮೆರೆದಾಟ ಸೆಣೆಸಾಟ!

ಈಗಲೇ ಈ ಕ್ಷಣ ಸಂಕಲ್ಪ ಮಾಡು
ಮಿಕ್ಕವುಗಳಂತೆ ಇದ್ದು ಹೋಗು
ಕರೆ ಬರಲು ಸುಮ್ಮನೆ ಎದ್ದು ಹೋಗು

# ಕತಿ

ಅಲ್ಯಾಕ ನೋಡ್ತಿ ಇಲ್ಯಾಕ ನೋಡ್ತಿ
ಕುಂತಲ್ಲೆ ನಿಂತಲ್ಲೆ ಎದ್ದೈತಿ ಜಾತ್ರಿ

ತನ್ನೊಳಗ ಮುಳುಗೈತಿ ಸುತ್ತೊಳಗ ಕರಿತೈತಿ
ಅತ್ತಿತ್ತ ನೋಡೊ ಮಟ
ಮುತ್ತಿಕ್ಕಿ ಓಡತೈತಿ ಕಂಡಂಗೆ ಕಳದೋಕ್ತಿ
ಕಟ್ಟಾಗಿ ಬಿಡ್ತೈತಿ ಬಿಟ್ಟಾಕಿ ಹಿಡಿತೈತಿ
ಸುಟ್ಟಂಗ ಮಾಡ್ತೈತಿ ಸುಡದಂಗ ಇಡ್ತೈತಿ
ಮುಗದ್ರೂನು ಮುಗಿವಲ್ದು ಕತಿ!



# ರೆಕ್ಕೆ ಬೀಸಿ ಹಕ್ಕಿಯಾಗಿ

ಅಗಣಿತ ತಾರಾಗಣಗಳ
ನಡುವೆ ಇರುವ ಮನುಜರ

ಒಂದು ನೆಲಕ್ಕೆ
ಒಂದು ಧರ್ಮಕ್ಕೆ
ಒಂದು ಮತಕ್ಕೆ
ಒಂದು ಜಾತಿಗೆ
ಒಂದು ಬಾವುಟಕ್ಕೆ
ಒಂದು ಬಣ್ಣಕ್ಕೆ
ಯಾಕೆ ಕಟ್ಟಿ ಹಾಕುವರೋ ...

ದಹನ ಮಾಡಿದರೂ
ಹಾರುವುದು ಚೇತನ ಬಂಧಿಸಲಾಗದು ...

# ಬೆವರೇ ನೀರು



ಬರಗಾಲದಲ್ಲಿ
ರಾಮ ದೂಮ ಚೋಮ
ನೆಲ ಬಗೆದು
ಬೆವರ ಹನಿಸಿ ಗಿಡ ನೆಟ್ಟರು

ಬಸಿದ ಬೆವರನೆ ಕುಡಿದು
ಗಿಡಗಳು ಬೇರು ಬಿಟ್ಟವು

ಭರಭರ ಬೆಳೆದು
ಬಾನಿಗೆ ಕೈ ಚಾಚಿ
ಮೋಡಗಳ ಕರೆದವು

ಮಳೆ ಸುರಿದು ಹಳ್ಳಕೊಳ್ಳ
ತುಂಬಿ ಹರಿದುದ್ದಕ್ಕೂ...
ಬಲೆ ಬೀಸಿ ಸೆಳೆದುಕೊಂಡವು
ಎದ್ದು ಬಿದ್ದು ಕಡಲ ಅಲೆಗಳು

ಬೆವರಿನಿಂದಲೆ ಮಳೆ
ಬೆವರಿನಿಂದಲೆ ಹೊಳೆ
ಬೆವರಿನಿಂದಲೆ...
ಕಳೆ – ಬೆಳೆ – ಇಳೆ – ಬಾಳ್ವೆ
ಬೆವರೇ ನೀರು
ನೂರು ತಲೆಮಾರು!
ನಿನ್ನೊಳಗೂ ಒಂದು ನದಿಯಿದೆ
ಒಮ್ಮೆ ಇಳಿದು ನೋಡು!



# ಕಾಯುವೆ

ನೀನೊದ್ದೆ ಕಲ್ಲು ಯಾರೆಂದು ತಿಳಿಯದೆ
ನಾ ನಿನ್ನ ಪ್ರಿಯತಮೆ!

ಧನ್ಯವಾದ ಧನ್ಯವಾದ ನೀನೊದ್ದೆ
ನಾನೀಗ ಹುಲ್ಲಿನ ಮೇಲೆ ಬಿದ್ದೆ

ಇಲ್ಲೇ ಕಾಯುವೆ ಎಂದಾದರೂ
ನೀನಿಲ್ಲಿ ಹುಲ್ಲಿನ ಮೇಲೆ
ಬಂದು ಕೂರುವೆ ಎಂದು...

ಎಲ್ಲಾ ನೆನಪಾಗುವುದು ನಿನಗೀಗ
ಹಾಡಲೊಂದು ನೊಂದ ಕೋಗಿಲೆ!

# ಹಕ್ಕಿ - ಚುಕ್ಕಿ

ಮೀನು ಈಸಲೆಂದು
ಪದುಮ ಅರಳಲೆಂದು
ಕಡಲಾವಿಯಾಗಿ ನಿಂದು
ಮಳೆಯಾಗಿ ತಾನು ಬಂದು
ಕೊಳವು ತುಂಬಿ ಬಂದು
ಆಳ ತಿಳಿಯಲೆಂದು
ಹಕ್ಕಿ ಹಾರಿ ಬಂದು
ಮುತ್ತಿಕ್ಕಿ ನೀರ ಬಿಂದು
ಹೆಕ್ಕಿ ಕೊಕ್ಕಿನಿಂದೆತ್ತಿ
ಎತ್ತಿ ಎತ್ತಿ ಎತ್ತಿ ಎತ್ತಿ
ನೀರು ತೀರದಂದು
ಗರುವ ತಾನು ಕೊಂದು
ಚುಕ್ಕಿ ಹೊಳೆಯಿತಂದು
ಚಂದ್ರ ಬೆಳಗಿತಂದು
ಬೆನ್ನ ಹಿಂದೆ ನಿಂತು!





# ಕರೋನ

ಬಿರಿದ ಭೂಮಿಗಳು
ಛಿದ್ರಗೊಂದ ಬೆಟ್ಟಗಳು
ಬತ್ತಿದ ನದಿಗಳು
ಕರಗಿದ ಹಿಮಗಡ್ಡೆಗಳು
ಯಮ ಪ್ರವಾಹಗಳು
ಕಡಿದ ಕಾಡುಗಳು
ಸಿಡಿದ ಜ್ವಾಲಾಮುಖಿಗಳು
ಬೆಂಕಿಮಳೆ ಧೂಳುಹೊಳೆ
ಕಣ್ಮರೆಯಾದ ಜೀವಸಂಕುಲಗಳು
ಒಂದೊಂದು –
ನಿನ್ನ ಕಿರೀಟದ ಮಣಿಗಳು!

ದುರಾಸೆ ಅಟ್ಟಹಾಸ
ಮದ ಮತ್ಸರ ಲಾಲಸೆ ಚಪಲ
ವೇಗ ಭೋಗ ರೋಗ
ಒಂದೊಂದು –
ನಿನ್ನ ಕಿರೀಟದ ವಜ್ರಗಳು

ಇಡೀ ಜಗತ್ತು
ನಿನ್ನ ಐಭೋಗಕೆ ಬೆರಗಾಗಿದೆ
ನಿನ್ನ ಪ್ರಭೆಯ ಮುಂದೆ
ತಾನೆ ಮಂಕಾಗಿದೆ



# ತೀರ್ಪು

ನಾನು ಹಸಿವೆಯಿಂದ ಸತ್ತೇ ಹೋಗುವೆ
ಅಂದುಕೊಂಡಿದ್ದೆ ಕೊನೆಗೂ ಅವರು
ನ್ಯಾಯದ ರೊಟ್ಟಿ ಎಸೆದರು

ನಾನು ಹಸಿದಿದ್ದೆ ಅದು ಸುಳ್ಳಲ್ಲ ಎಂದು
ಖಾತರಿಪಡಿಸಿಕೊಳ್ಳಲು
ಸಾವಿರ ಸಾಕ್ಷ್ಯಗಳನ್ನು ಸಂಗ್ರಹಿಸಿದರು

ಎಷ್ಟೊಂದು ಅಡೆತಡೆಗಳು
ವಾದ ಪ್ರತಿವಾದಗಳು
ಕೊನೆಗೂ ತೀರ್ಪು
ಹಸಿದವಳ ಪರವಾಯಿತು

ತಡವಾದರೂ ರೊಟ್ಟಿ
ನೀಡಿದರು ಧನ್ಯವಾದಗಳು

ರೊಟ್ಟಿ ಸಿಗುವವನಕ ಸೆಣೆಸಾಡಲು
ಉಸಿರೂಡಿದ ಗಾಳಿಯೇ ನೀ
ಕರುಣಾಳು



# ಪಡೆಯುವರೆ ಸಗ್ಗ

ರಕ್ತಸಿಕ್ತ ಕೈಗಳಿಂದ
ದೇವರನ್ನಾದರೂ
ಹೇಗೆ ಪ್ರಾರ್ಥಿಸುತ್ತೀಯಾ?

ನರಳಿಕೆಗೆ ಕಿವುಡಾದವನೇ
ದೇವರ ಗುಣವನ್ನಾದರೂ
ಬಾಯ್ತುಂಬ ಹೇಗೆ ಮಾಡುತ್ತೀಯಾ?

ಚಿಂದಿಯಾಗಿ ಚೆಲ್ಲಾಡಿದೆ ದೇಹ
ನೋಟಕ್ಕೆ ಕುರುಡಾದವನೇ
ದೇವರ ಕಣ್ಣಲ್ಲಿ ಕಣ್ಣಿಟ್ಟು
ಹೇಗೆ ನೋಡುತ್ತೀಯಾ?

ಇಲ್ಲಿ ನರಕ ಸೃಷ್ಟಿಸಿದವರು
ಅಲ್ಲಿ ಪಡೆಯುವರೇ ಸಗ್ಗ
ಇದನೆಲ್ಲಾ ಮೆಚ್ಚುವನೆ ಸರ್ವಶಕ್ತ?



# ಸಾಧ್ಯವಿಲ್ಲದ್ದು

ಬೆಕ್ಕಿಗೆ ಹಾಲು ನೀಡಿದರೆ
ಹಕ್ಕಿಗೆ ಕಾಳು ನೀಡಿದರೆ
ನಾಯಿಗೆ ರೊಟ್ಟಿ ನೀಡಿದರೆ
ಮೊಲಕ್ಕೆ ಸೊಪ್ಪು ನೀಡಿದರೆ
ಹಸುವಿಗೆ ಹುಲ್ಲು ನೀಡಿದರೆ
ಇರುವೆಗೆ ಸಕ್ಕರೆ ನೀಡಿದರೆ

ಪ್ರೀತಿಯ ಬಲೆಯಲ್ಲಿ
ಸಿಲುಕುವುದು ಖಚಿತ
ಕಟ್ಟಿಕೊಂಡಾಗ ಪುಳಕ
ಅಟ್ಟಿಬಿಡುವಾಗ ನರಕ!

ಜಗತ್ತು ವಿಶಾಲವಾಗಿದೆ
ದಯೆ ಅಪಾರವಾಗಿದೆ
ದೈವ ಅವರ ಪರವಾಗಿದೆ
ಅಂದುಕೊಳ್ಳುವುದೇ ಉಚಿತ

ಹೆಸರಿಗೆ ಮೂಕಲೋಕ
ಜೀವ ಪೂರ್ಣ ಪರಿಪಾಕ

# ಬಲು ಕಷ್ಟ

ನಮಗಿಂತ ಬಲವಾನರು
ಇದ್ದೇ ಇರುವರು
ನಮಗಿಂತ ಬಲಹೀನರು
ಇದ್ದೇ ಇರುವರು

ಅತ್ತ ಕೈ ಚಾಚಬೇಕು
ಇತ್ತ ಕೈ ಹಿಡಿಯಬೇಕು

ಅಂಕೆಗೆ ಒಳಪಡಬಾರದು
ವಿಪರೀತ ಶಂಕಿಸಲೂಬಾರದು

ಅಯ್ಯಾ ಎನಬೇಕು
ಎಲವೋ ಎನಬಾರದು!

ನುಡಿವುದು ಸುಲಭ
ನಡೆವುದು ಬಲು ಕಷ್ಟ

# ಮುಂದೆ ಒಂದು ದಿನ...



ಮುಂದೆ ಒಂದು ದಿನ
ಬಾಳೆ ಕತ್ತರಿಸಿ ಎಸೆದಂತೆ
ಕಟ್ಟಡಗಳ ನೆಲಸಮಗೊಳಿಸಿ
ಕೆರೆಕಟ್ಟೆಗಳನ್ನಾಗಿಸಿ
ಮಳೆನೀರ ತುಂಬಿಡುವರು
ಹೊಂಡ ಗುಂಡಿ ಗಿಂಡಿ ಎನದೆ
ನೀರ ತುಂಬಿಡುವರು

ಬಾಳೆ ಕತ್ತರಿಸಿ ಎಸೆದಂತೆ
ಕಟ್ಟಡಗಳ ಕಿತ್ತೆಸೆದು
ಭತ್ತ ರಾಗಿ ಜೋಳ
ಹೂವು ಹಣ್ಣು ಬೆಳೆವರು

ಬಯಲಲ್ಲಿ ಬಿಸಿಲಿಗೆ ಮೈಯೊಡ್ಡಿ
ಬದುಕು ಮಾಡುವರು
ರಾತ್ರಿ ಚಂದ್ರನ ಹೊದ್ದು ಕನಸು ಕಾಣುವರು!

ಸಾಗರಗಳು ಸಾವಿರ ಇದ್ದರೂ
ಸಲಹದಿದ್ದರೆ ಸುಡುಗಾಡು

# ಕರೋನ -
# ಮನುಜನೆಸಗಿದ ಪಾಪ?

ಸಮುದ್ರಗಳ ಈಜಿ ಬಂತೋ
ಬೆಟ್ಟಗಳನೇರಿ ಬಂತೋ
ಮರುಭೂಮಿಗಳ ದಾಟಿ ಬಂತೋ
ಕಾವಳಗಳ ಸೀಳಿ ಬಂತೋ

ವಲಸೆ ಬಂದು ಗಾಳಿ ಗೂಡುಗಳಲಿ
ನೆಲಸಿ ಮೊಟ್ಟೆ ಹಾಕಿ ಕಾವುಕೊಟ್ಟು
ಮರಿ ಮಾಡಿ ಹಾರಿ ಬಿಟ್ಟಿತೋ...
ಜತೆಗೆ ಉಸಿರಿನ ಪರಿಮಳ ತೂರಿ ಬಿಟ್ಟಿತೋ

ನೆಗಡಿ ಜ್ವರ ಶೀತ ಕೆಮ್ಮು ದಮ್ಮು
ಎಲ್ಲಾ ನೆಪ
ಕೋಪ ತಾಪ ಶಾಪ ಕೂಪ
ಕಡಿಮೆಯೆ ಮನುಜನೆಸಗಿದ ಪಾಪ?

# ಈ ಜನರು

ಇವರು ಮಡಿಯುವ ತನಕ
ದುಡಿದು ಉಣ್ಣುವರು
ಹಸಿವೆಗೆ ಅಂಜಿದಷ್ಟು ಸಾವಿಗೂ ಅಂಜರು

ಇವರು ಗಳಿಸಿ ಉಳಿಸಿ ಉಣ್ಣುವವರು
ಜಾತಿ ಕುಲ ಮತ ಮರುವಾದೆ ಎಂದು
ಬಡಿದಾಡಿ ಚ್ಯುತಿ ಬಂದರೆ
ಪ್ರಾಣ ಪಣ ಒಡ್ಡುವರು

ಇವರು ಪಡೆದು ಬಂದವರು
ಅಧಿಕಾರ ಸಿರಿಸಂಪತ್ತು ಕಳೆದರೆ
ಬದುಕು ಕೊನೆಗೊಂಡಂತೆ ಆಡುವರು!

ಇವರು ಒಂದೇ ದೇಶವಾಸಿಗಳು
ಒಂದೇ ಭೂಮಿಯ ನಿವಾಸಿಗಳು
ನಗಣ್ಯರು ಸಾಮಾನ್ಯರು
ಮತ್ತು ವಿಶೇಷ ಜನರು



# ನೀನೂ ಒಂದು ಕ್ರಿಮಿ

ಮೀನುಗಳಿದ್ದರೆ ತಾನೆ
ಕಡಲಿಗೆ ಜೀವ ಬರುವುದು?

ಹಕ್ಕಿಗಳು ಹಾರಿದರೆ ತಾನೆ
ಆಕಾಶ ಗರಿಗೆದರುವುದು?

ಆನೆ ಹುಲಿ ಸಿಂಹ
ಸಂಚರಿಸಿದರೆ ತಾನೆ
ಕಾಡು ಸಂಭ್ರಮಿಸುವುದು?

ಎಂಭತ್ತುನಾಲ್ಕುಲಕ್ಷ ಜೀವರಾಶಿಗಳ
ತಾವು ಈ ಭೂಮಿ
ತಿಳಕೋ ನೀನೂ ಒಂದು ಕ್ರಿಮಿ!



# ಅನ್ನ - ಚಿನ್ನ



ಚಿನ್ನದ ಬೆಟ್ಟವೇ ಎದುರಿಗೆ ನಿಂತಿರಲು
ಹಕ್ಕಿ ಹಿಕ್ಕೆ ಹಾಕಿ ಹೋಯಿತು
ಕಡವೆ ಕೊಂಬುಜ್ಜಿ ಹೋಯಿತು
ನಾಯಿ ಹಿಂಗಾಲೆತ್ತಿತು

ಫಳಫಳ ಹೊಳೆಯುವ ಬೆಟ್ಟ
ಮನುಜನ ಎದೆ ಡವಗುಟ್ಟಿತು
ಬೆಲೆ ಕಟ್ಟಲಾಗದೆ ಬೆವರಿತು

ರೊಟ್ಟಿ ಇಲ್ಲದ ದಿನ
ಮುದ್ದೆ ಬೆಟ್ಟವ ಮುರಿದು
ನುಂಗಿದಂತೆ ಕನಸು ಕಂಡರು ಜನ

# ಪುರಂದರರದಾಸರು

ದಾಸ ನಾನು ತಿರಿದು ತಿಂಬುವೆನು
ಬುಗುರಿಯಂತೆ ತಿರುತಿರುಗಿ
ತಿಗರಿಯಲಿ ತಿಳಿವಿಂಗೆ ರೂಪ ಕೊಡುವೆನು

ದೋಚುವವನಲ್ಲ ಕೈ ಚಾಚುವವನಲ್ಲ
ಕೇಡಿಲ್ಲದ ಹಾಡು ಹಾಡಿ
ಅರೆಗಳಿಗೆ ಕಾಡುವೆನು

ನೀಡಿದ ಕರಗಳು ತುಂಬಿ ತುಳುಕಲಿ
ಸಕಲವೂ ಶ್ರೀಹರಿಗೆ ಸಲ್ಲಲಿ

# ಅಕ್ಕನ ಸೀರೆ

ತೊಟ್ಟ ಒಡವೆ ಉಟ್ಟ ಸೀರೆ
ಬಿಸುಟು ನಡೆದವಳಿಗೆ
ಸೀರೆ ಉಡಿಸಲು ಹರಸಾಹಸ
ಪಟ್ಟಿತು ಲೋಕ
ಬಟ್ಟೆಗೆಟ್ಟವಳೆಂದು ಅಡಿಗಡಿಗೂ
ಬಿರುನುಡಿಗಳನ್ನಾಡಿತು ಲೋಕ

ತಿರಿದು ತಿಂದು ಕೆರೆ ಬಾವಿಗಳ
ನೀರು ಕುಡಿದು ಹಾಳು
ದೇಗುಲಗಳಲ್ಲಿ ತಂಗಿ
ಆತ್ಮಸಂಗಾತಗೆ ಒರಗಿ
ಕತ್ತಲ ಬತ್ತಲಾಗಿಸಿ ಎತ್ತೆತ್ತಲೋ
ನಡೆದು ಕದಳಿ ಕಂಡವಳಿಗೆ
ಚೆನ್ನಮಲ್ಲಿಕಾರ್ಜುನ ದೇವರೇ
ವಸ್ತು ಒಡವೆ ವಸ್ತ್ರ ಅಸ್ತ್ರ

ಹಾಡಲು ಹೊಚ್ಚಲು ಮುಚ್ಚಲು
ಅವನಿರೆ ಬೇಕೆ? ಬಟ್ಟೆಬರೆ

# ಕವಿತೆ

ಮೂಳೆ ಮಾಂಸ ಮಜ್ಜೆ
ರಸ ಗಂಧ ಸ್ಪರ್ಶ ರೂಪ ತಳೆದು
ಹೊಳೆದು ನಿಂತ ಕವಿತೆಯೇ...

ಅರೆ ಇದೇನಿದು?
ಕಣ್ಣಲ್ಲಿ ಮಡುಗಟ್ಟಿದೆ ಕ್ಷೋಭೆ
ಕದಪುಗಳು ಕಾದು ಕೆಂಪಗೆ
ತುಟಿ ನಡುಗಿದೆ ಕಂಠ ಬಿಗಿದಿದೆ
ಹೂ ಬಿರಿವ ಸದ್ದನಾಲಿಸಿದೆ ಕಿವಿ
ತಲ್ಲಣಿಸಿ ಎದೆ ನವರಸಗಳಲ್ಲಿ ತೇಲಿ
ಮುಳುಗಿ ತುಯ್ಯುತಿದೆ –
ಹಿಡಿಹೃದಯ ಬಡಿಯುತಿದೆ
ನರನಾಡಿ ಮಿಡಿದು
ಹುರಿದುಂಬಿಸಿ ಪ್ರಾಣವಾಯು
ಸಂಚರಿಹಳು ರಕ್ತದೇವತೆ!
ಲಜ್ಜೆ ಸಂಕೋಚಗಳೇ ಅವಳ ತ್ರಾಣ ಪ್ರಾಣ

ಸಕಲ ಜೀವಸಂಕುಲವ
ತಬ್ಬಿ ನಿಂತಿವೆ ಕೈಗಳು

ಕಾಲುಗಳೋ ಬೇರೂರಿ ನಿಂತು
ತೊಟ್ಟಿವೆ ನಕ್ಷತ್ರಗಳು!

ನಿಂತು ನೋಡಿದೆ ಹಾಡಿದೆ
ನೀ ವಿಶ್ವರೂಪಿ
ಮೈತ್ರಿ – ಕರುಣೆಯಂತೆ ನೀ ವಿಶ್ವವ್ಯಾಪಿ

# ಕವಿ



ನಾನು ಹಾಡುತ್ತಿದ್ದೆ
ನನ್ನ ನಾಲಗೆಯೇ ಅವರ
ಕತ್ತಿಗೆ ಈಡಾಯಿತು

ತದನಂತರ ನಾನು ಬರೆಯತೊಡಗಿದೆ
ನನ್ನ ಕೈಗಳನ್ನವರು
ನಿರ್ದಯವಾಗಿ ತುಂಡರಿಸಿದರು

ತದನಂತರ ಭಯವಿಲ್ಲದೆ ಸಂಚರಿಸಿದೆ
ನನ್ನ ಕಾಲ ಸಪ್ಪಳದಲ್ಲಿ ಏನೋ
ಸಂದೇಶವಿರಬಹುದೆಂದು ಕಡಿದು ಹಾಕಿದರು

ನಾನೀಗ ಮೂಗಿ ಹೆಳವಿ ಕೈಯಿಲ್ಲದವಳು
ನಾ ಎಲ್ಲಿರುವೆನೋ ಅಲ್ಲೇ ಬಂದು
ನನ್ನನ್ನವರು ಕಾಣುವರು
ನನ್ನ ಹೆಗಲ ಮೇಲೆ ತಲೆಯಿಟ್ಟು
ಕೆನ್ನೆಗೆ ಕೆನ್ನೆತಾಗಿಸಿ ಬಿಸಿಯುಸಿರ ಎರೆಯುವರು

ಕಣ್ಣೊಳಗೆ ಕಣ್ಣನಿರಿಸಿ
ಮನದಿಂಗಿತ ಅರಿಯುವರು
ಎದೆಯೊಳಗೇನಿದೆಯೆಂದು
ಬಗೆಯದೆ ನೋಡುವರು...

ವಿಷಾದವೇನೂ ಇಲ್ಲ
ಬದುಕಿರುವೆ ಧನ್ಯವಾದಗಳು

ಜೀವನದಿಗಳನ್ನೆಲ್ಲಾ ಬತ್ತಿಸಿದರೆ
ಏನಾಗುವುದು?
ರಕ್ತದ ಕಾಲುವೆಗಳಲ್ಲಿ
ದೋಣಿಗಳು ತೇಲುವವು!



# ಅನುವಾದಿಸಲಾರೆ

ಹಿಬ್ರೂ ಸ್ಪಾನಿಷ್ ಮೆಕ್ಸಿಕನ್ ಲಿಥಿನೋವಿಯನ್
ಪರ್ಶಿಯನ್ ತಮಿಳು ತೆಲುಗು ಬಂಗಾಳಿ
ಗುಜರಾತಿ ಒಡಿಯಾ ಕೊಂಕಣಿ ತುಳು ಕನ್ನಡ
ಬಲು ಕಷ್ಟ ಕವಿತೆಗಳ ಅನುವಾದಿಸಲಾರೆ

ಬಲು ಕಷ್ಟ
ಪರಮ ಪರಿಮಳದ ಹೂವನ್ನೂ
ಬೆಂಕಿಯ ಬಿಸುಪನ್ನೂ
ನವಿಲ ಕೇಕೆಯನ್ನೂ ಚಂದ್ರನ ನಗೆಯನ್ನೂ
ಅನುವಾದಿಸಲಾಗುವುದೆ ?

ಶಬುದಗಳ ಆಟ – ಪಾಠ
ಹೊರಳಾಟ ಉರುಳಾಟ ಚಿನ್ನಾಟ
ಬಳುಕಾಟ ಬಗೆವಾಟ
ನರಳಾಟ ಕೆರಳಾಟ ಮಂಗಾಟ
ಅನುವಾದಿಸಲಾಗುವುದೆ ?

ಬಲು ಕಷ್ಟ
ಕಣ್ಣೊಳಗಣ ಆರ್ದ್ರನೋಟ
ಕೊಂಕು ತುಟಿಯ ಕೆಣಕುವಾಟ
ಮೈ – ಮಾಟ ಎದೆಯ ಸ್ಫೋಟ
ಅನುವಾದಿಸಲಾಗುವುದೇ?

ತಣಿಯದ ಹಸಿವ
ಬಸಿಯುವ ಬೆವರ
ಬೆಳೆಯುವ ಬಸಿರ
ಹೇಗೆ ಅನುವಾದಿಸುವೆ?

ಮೌನದಾಚೆಯ ಭಾಷೆ – ಆಶೆ
ಧಗೆ ನಗೆ ಹೊಗೆ ಹಗೆ
ಇಲ್ಲ ಅನುವಾದಿಸಲಾರೆ...

# ಮಗು ಮತ್ತು ಹಕ್ಕಿ



ಆ ಹಕ್ಕಿ ರೆಂಬೆಯಿಂದ ಕೊಂಬೆಗೆ
ಕೊಂಬೆಯಿಂದ ರೆಂಬೆಗೆ ಏರಿತು ಹಾರಿತು

ಆ ಹಕ್ಕಿ ಪಟಪಟ ರೆಕ್ಕೆ ಬಡಿದು
ಮರದ ಬೊಡ್ಡೆಗೆ ಮುಸುಡಿ ತಿಕ್ಕಿ
ಕೊಕ್ಕನುಜ್ಜಿ ಸಾಪು ಮಾಡಿತು

ಆ ಹಕ್ಕಿ ಹುಳವ ಹೆಕ್ಕಿತು
ಹಣ್ಣ ಮುಕ್ಕಿತು

ಬೆರಗುಗಣ್ಣಿನಿಂದ ಮಗು
ಅಮ್ಮನಿಗೆ ಕೇಳಿತು
ಪಂಜರದಲ್ಲೇಕೆ ಇಲ್ಲವಿದು?

ತಾಯಿ ನುಡಿದಳು
ಹಕ್ಕಿಯ ಗುಣವೇ ಹಾರುವುದು
ತಡಿ... ನಿನಗೂ ಅರಿವಾಗುವುದು!

# ವರ್ತಮಾನ

ತುಳಿಯುವಿರಾ? ತುಳಿಯಿರಿ
ಪಾತಾಳದಲ್ಲೂ ಒಂದು ಲೋಕವಿದೆಯಂತೆ!

ಹಾಂ! ಹಾಗೆ ಮೇಲೆತ್ತಿ ಆಗಸಕ್ಕೆ
ಒಗೆದಿರಾ? ಒಗೆಯಿರಿ
ನಕ್ಷತ್ರದಲ್ಲೂ ಒಂದು ಲೋಕವಿದೆಯಂತೆ!

ಹಳಿಯುವಿರಾ? ಹಳಿಯಿರಿ
ವರ್ತಮಾನದ ಈ ಲೋಕ ಇದಕ್ಕಿಂತ
ಮಿಗಿಲುಂಟೆ? ಈ ಭೂಮಿಯೇ ನರಕ!

ನನಗೆ ನಾನೇ ಕೇಳಿಕೊಂಡೆ
ಯಾಕೆ ಬದುಕಿರುವೆ ಬಡಜೀವವೇ?
ತುಸು ಮುಂದೆ ತುಸು ಹಿಂದೆ
ಹೊಯ್ದಾಡಿತು ಪ್ರಾಣಪದಕ



# ತಬ್ಬಲಿಗಳಿಗೆ ತಾವೆಲ್ಲಿ?

ಗವಿ ಗೂಡು ಬಿಲ
ಪೊಟರೆ ಪೊದೆ
ಇರುವೆಗೂ ತಾವಿದೆ!

ಇವನೋ ಪುಟ್ಟ ಕಂದನು
ಮರದಡಿ ಒಬ್ಬನೇ ಕಾದಿಹನು

ಗಾಳಿ ಬೀಸಲು
ತರಗೆಲೆ ಹಾರಲು
ಮಂದಿ ಓಡೋಡಿ
ಮನೆ ಸೇರಿ ಬೆಚ್ಚಗಿರಲು

ಗುಡುಗು ಮಿಂಚು
ತೊಟತೊಟ ಹನಿಗಳು
ಕತ್ತಲು ಬೆಳಕಿನಾಟದಲಿ
ಆಲಿಕಲ್ಲಿನ ದನಿಗಳು

ಸಿಡಿಲೊಂದು ಬಡಿಯಲು
ಮೈನಡುಗಿ ಉರಿವ ಮರವನೆ
ತಾಯೆಂದು ತಬ್ಬಿರಲು...

# ಭರವಸೆಯೇ ಹುಟ್ಟು

ಬುದ್ಧ ಗಡಿಪಾರು ಆಗಲಿಲ್ಲವೇ?
ಓ... ಗಾಂಧಿ
ಈಗ ನೀನೂ ಆಗಿರುವೆ

ಒಮ್ಮೊಮ್ಮೆ ಹೀಗೆ ಆಗುತ್ತದೆ
ಮನೆಮಂದಿಗೆ ಅಪ್ಪ ಅಮ್ಮ ಬೇಡವಾಗುತ್ತಾರೆ
ಬಂಧು ಬಳಗ ದೂರ ಇಡುತ್ತಾರೆ
ಕಟಕಟೆಯಲ್ಲೂ ನಿಲ್ಲಿಸುವರು
ತಿರಸ್ಕಾರ ಬಹಿಷ್ಕಾರ ಏನೆಲ್ಲ ಆಗಬಹುದು

ನಿನ್ನನ್ನವರು ನೀರಿಗೆ ದೂಡಬಹುದು
ಗಡಿಪಾರು ಮಾಡಬಹುದು
ಅಲ್ಲಿ ಹರಿಗೋಲೊಂದು ಕಾದಿರುತ್ತದೆ
ಅದು ಜತನದಿಂದ ದಡ ಸೇರಿಸುವುದು
ಹೃದಯವಂತರು
ನಿನ್ನನ್ನು ಬರಮಾಡಿಕೊಳ್ಳುವರು
ನಿನಗೆ ಮರುಜೀವ ನೀಡುವರು

ಪುಣ್ಯಕ್ಕೆ ಭೂಮಿಯ ಮುಕ್ಕಾಲು ಭಾಗ
ನೀರೋ ನೀರು...
ಭರವಸೆಯೇ ಹುಟ್ಟು!

# ಶಿವ ಸಿಗುವನೆ?

ಹರಹರ ಮಹದೇವ
ಶಂಭೋ ಶಂಕರ

ಗಂಟಲು ಹರಿದರೆ
ಕುಣಿದರೆ ದಣಿದರೆ
ಶಿವ ಸಿಗುವನೆ?

ತಾಳ ಮೇಳಗಳಿಗೆ
ಜಪತಪ ಪೂಜೆ
ಧ್ಯಾನ ಗ್ಯಾನಗಳಿಗೆ
ಶಿವ ಸಿಗುವನೆ?

ಬೇಡಲು ಸಿಗುವನೆ?
ಹಾಡಲು ಸಿಗುವನೆ?
ಕಾಡಲು ಸಿಗುವನೆ?

ಭಿಕ್ಷಕ್ಕೆ ಬರುವನೆ?
ಕೂಗಿ ಕರೆವನೆ?
ಇಲ್ಲವ ಎಲ್ಲವ ನೀಗುವನೆ?
ಬಾಗುವನೆ ಬೀಗದೆ...



# ತಾನೇ ಮರ ಬೆಳೆಯುತ್ತದೆ

ಗಾಳಿ ಬೀಸಿ ಬೀಜಗಳನೊಯ್ದು
ಅಲ್ಲಲ್ಲಿ ಇಡುತ್ತದೆ ಮರ ಬೆಳೆಯುತ್ತದೆ

ನದಿಯಲ್ಲಿ ಈಜಿ ಬೀಜಗಳು
ದಡ ಮುಟ್ಟುತ್ತವೆ ಮರ ಬೆಳೆಯುತ್ತದೆ

ಹಕ್ಕಿ ಮುಕ್ಕಿಮುಕ್ಕಿ ಹಿಕ್ಕೆ ಹಾಕಿ
ಮರ ಬೆಳೆಯುತ್ತದೆ

ಯಾರ ಹಂಗಿಲ್ಲದೆ ತಾನೇ
ಮೈದುಂಬಿ ಮರ ಬೆಳೆಯುತ್ತದೆ

ಕೇಡಿನ ಕೈಯೊಂದು ಸಾಲುಸಾಲು
ಮರ ಕಡಿಯುತ್ತದೆ

ಅಷ್ಟೇ ಅಲ್ಲ ಗಾಳಿ ಇಲ್ಲ ಮಳೆ ಇಲ್ಲ
ಬೆಳೆ ಇಲ್ಲ ಎಂದು ಹುಯ್ಲಿಡುತ್ತದೆ



# ಎಡೆ

ಕೈ ಕಾಲುಗಳ ಅಕ್ಷರಶಃ ತೇದುಕೊಂಡೆ
ಹಗಲು ರಾತ್ರಿಗಳ ಪರಿವೆಯಿಲ್ಲದೆ

ತಟ್ಟೆ ತುಂಬಲಿಲ್ಲ ಹೊಟ್ಟೆ ತುಂಬಲಿಲ್ಲ
ನಡ ಬಗ್ಗಿಸಿದೆ ತಲೆ ತಗ್ಗಿಸಿದೆ
ಕೈಯ ಮುಗಿದೆ ಕಾಲು ಹಿಡಿದೆ
ಸೋಲನ್ನಪ್ಪುವಷ್ಟು ರಟ್ಟೆಗಳ ದುಡಿಸಿದೆ

ತೀರಿಕೊಂಡ ಮೇಲೆ ಎಡೆ ಹಾಕಿಹರು
ಬಗೆ ಬಗೆ
ಈಗಲೂ ಬಾಯಿ ಹಾಕದೆ
ಕಣ್ಣು ತುಂಬಿಕೊಂಡಿರುವೆ



# ಗಂಡು ಹೆಣ್ಣು ಸಮಾನತೆ ಇತ್ಯಾದಿ



ಅಮೆರಿಕಾದಲ್ಲಿ ಹೆಣ್ಣು ಗಂಡಿಗೆ ಸಮಾನಳೆ?
ಜರ್ಮನಿಯಲ್ಲಿ? ಜಪಾನಿನಲ್ಲಿ?
ಚೀನಾದಲ್ಲಿ? ಅರೇಬಿಯಾದಲ್ಲಿ?
ಲಂಕಾದಲ್ಲಿ? ಇಂಡಿಯಾದಲ್ಲಿ?

ಯಾಕೋ ಮಂಕಾಗಿ
ನನಗೆ ನಾನೇ ಹೇಳಿಕೊಂಡೆ...

ನರಿ ನರಿ
ಕುರಿ ಕುರಿ

ಹೆಚ್ಚೆಂದರೆ ಗಂಡುಕುರಿ ಹೆಣ್ಣುಕುರಿ
ಎತ್ತು – ಹಸು
ಕೋಣ – ಎಮ್ಮೆ
ಹುಂಜ – ಕೋಳಿ
ಹೋತ – ಆಡು
ಗುರುತಿಸಲು ಅಷ್ಟೇ
ಗಂಡು ಹೆಣ್ಣು ಎಂದು
ಸೂಚಿಸಲು ಅಷ್ಟೇ

ವಿಶೇಷ ಗೌರವ ಮಾನ್ಯತೆ ಸಂಭ್ರಮ
ಸಂಮಾನ ಇತರೆ
ಜೀವಸಂಕುಲದಲ್ಲಿ ಇಲ್ಲವಷ್ಟೇ...

ಮನುಜ ಕುಲದಲ್ಲಿ ಮಾತ್ರವೇ
ಹುಟ್ಟಡಗಿಸಲು ಹೀಯಾಳಿಸಲು
ಅವಮಾನಿಸಲು ಇಲ್ಲವಾಗಿಸಲು
'ಹೆಣ್ಣು' ಅಷ್ಟಕ್ಕಷ್ಟೆ...



# ಬಂದೇ ಬರುವೆ

ಉಸಿರೆಳೆದುಕೊಂಡೆ ಹುಟ್ಟಾಯಿತು
ಉಸಿರುಬಿಟ್ಟೆ ಸಾವಾಯಿತು

ಎಲ್ಲಿ ಹೋಗುವೆ? ಬರುವೆ...
ಇಲ್ಲೇ ಇರುವೆ ಉಸಿರಾಡುತಿರುವೆ
ಬಸಿರಿನಲಿ ಈಜಾಡುತಿರುವೆ

# ದಿನದ ಪ್ರಾರ್ಥನೆ

ಎದ್ದ ಕೂಡಲೆ ಒಲೆ ಹಚ್ಚುವೆ
ದೀಪ ಬೆಳಗಿದಂತೆ...

ಹೆಚ್ಚುವುದು ಕೊಚ್ಚುವುದು
ಸೋಸುವುದು ಕಾಸುವುದು
ಹುರಿಯುವುದು ಕರಿಯುವುದು
ಭಕ್ತಿಯಿಂದಲೇ ಮಾಡುವೆ
ನಡುನಡುವೆ ಹಾಡುವೆ ಗೊಣಗುವೆ
ಇದುವೇ ಮನೆಮಂದಿಯ
ಶಕ್ತಿ ಅನುರಕ್ತಿಯ ಮೂಲ
ಅರಿತಿರುವೆ ನುರಿತಂತೆ...

ಅಯ್ಯೋ ಎಷ್ಟು ಮಾಡಿದರೂ ಅಷ್ಟೇ
ಎಂದು ನಿಡುಸುಯ್ದರೂ
ತಾನೇ ಅಡುವುದು ರಟ್ಟೆ
ತುಂಬಿಕೊಡುವೆ, ನೀಡುವೆ
ಬೆಚ್ಚಗಿಟ್ಟು ಕಾಯುವೆ ಜಗದ ಹೊಟ್ಟೆ



ಕಸ ಒಗೆದು ಹಾಲಕಾಸಿ
ಕಟ್ಟೆ ಒರೆಸಿ ಸೊಪ್ಪು ಸೋಸಿ
ಹೆಪ್ಪನೆರೆದು ಕಾಳುನೆನೆಸಿ
ಕಣ್ಣು ಎಳೆದು ಮದ್ದನರೆದು
ನಿದ್ದೆ ಕರೆದು ಕೈಯ ಮುಗಿಯುವೆ
ಮುಗಿವುದಲ್ಲಿಗೆ ದಿನದ ಪ್ರಾರ್ಥನೆ!

# ಏನು ಕಂಡರೋ?

ಈ ತುಂಡು ಬಟ್ಟೆ ಮನುಜನಲ್ಲಿ
ಏನು ಕಂಡರೋ?

ರಾಮನನ್ನು ಏಸುವನ್ನು
ಬುದ್ಧನನ್ನು ಬದ್ಧನನ್ನು
ಯಾರ ಕಂಡರೋ?

ದೇವದೂತ ಸಾಧುಸಂತ
ರಾಜತಂತ್ರ ಶಾಂತಿಮಂತ್ರ
ದಂಗು ಬಡಿದು
ಕೈ ಮುಗಿದು ಜತೆಗೆ ನಡೆದರೋ

ಕೊರತೆ ಕೀಳರಿಮೆ ನೀಗಿಕೊಂಡು
ಹಿರಿಮೆ ಗರಿಮೆ ಗಳಿಸಿಕೊಂಡು
ಧೈರ್ಯ ಸ್ಥೈರ್ಯ ತಾವಾಗಿ
ಕಂಡುಕೊಂಡರೋ

ಸುಳ್ಳ ಕಳ್ಳ ಮಳ್ಳ ತಮ್ಮಂತೆ
ಎಂದುಕೊಂಡರೋ
ದೃಢತೆ ಸಮತೆ ಕ್ಷಮತೆ
ಪ್ರೇಮದೊರತೆ ತುಂಬಿಕೊಂಡರೋ
ಜಿಗುಟು ಜಿಗುಟು

ಉಸಿರಿನಳತೆಯಲ್ಲಿ ಎಟಕು
ಕಡಿದುಕೊಳ್ಳಲಾಗದಷ್ಟು
ಅಂಟು ನಂಟು
ಕರಗಲಾರದಷ್ಟು ದೊಡ್ಡ ಗಂಟು
ಬಿಡಿಸಲಾಗದಂಥ ಒಗಟು
ಅಂದುಕೊಂಡರೋ...



# ಬಸವ ಜಯಂತಿ

ಕದ್ದು ಕೊಂದು ಹುಸಿಯ ನುಡಿದು
ಪರರ ಜರಿದು ನುರಿದು
ತನ್ನ ಬಣ್ಣಿಸಿ ಪರರ.ಹಂಗಿಸಿ
ನಡೆ ನುಡಿಯ ಭಂಗಿಸಿ ಬಾಳಿದರೂ

ವರುಷಕ್ಕೊಮ್ಮೆ ಹರುಷದಿಂದ
ಹೂವಿಡುವೆ ಪೊಡಮಡುವೆ

# ಎಲ್ಲಿಂದ ಎಲ್ಲಿಗೆ

ಈ ದಿನಗಳಲ್ಲಿ ಎಲ್ಲೆಲ್ಲೂ
ಮಾತಿನ ಬೀದಿ ಕಾಳಗ
ವಾದ ಪ್ರತಿವಾದಗಳೇ
ಶಸ್ತ್ರಾಸ್ತ್ರಗಳು!

ಕ್ರಿಯೆ ಎಂದರೆ ಲಾಠಿ ಬೀಸುವುದು
ಕಲ್ಲು ತೂರುವುದು

ಮೆರವಣಿಗೆ ಪ್ರತಿಭಟನೆ
ಮನವಿ ಸಲ್ಲಿಸುವುದೇ ಕಾಯಕ

ಘೋಷಣೆ – ದೂಷಣೆಗಳೇ ಸಂಗೀತ
ದೂರುಗಳು ನೋಟೀಸುಗಳು
ಎಫ್. ಐ. ಆರ್
ಮುಂತಾದವುಗಳೇ ಸಾಹಿತ್ಯ!

ರಾಷ್ಟ್ರನಿರ್ಮಾಣದ ಹೊಸ: ಪಥ
ಎಲ್ಲಿಂದ ಎಲ್ಲಿಗೆ?



# ನ್ಯಾಯವೇನು?

ನೀನು ನಡೆದಾಡುವ
ನೆಲ ಗುಡಿಸಿದವನು ನಾನು

ನೀನು ಮೆಟ್ಟಿದ ಜೋಡು
ಹೊಲೆದವನು ನಾನು

ನೀನು ಧರಿಸಿದ ಬಟ್ಟೆಯ ನೂಲು
ತೆಗೆದವನು ನಾನು

ನೀನು ಉಣ್ಣುವ ಅನ್ನ
ಬೆಳೆದವನು ನಾನು

ನಿನ್ನ ಕಿರೀಟದ ವಜ್ರ
ಕೆತ್ತಿದವನು ನಾನು

ನಿನ್ನನ್ನು ಗದ್ದುಗೆಯ ಮೇಲೆ
ಕುಳ್ಳಿರಿಸಿದವನೂ ನಾನೇ
ಉಘೇ ಉಘೇ ಎಂದು ಹೂವು
ತೂರಿ ಕುಣಿದವನು ನಾನೇ

ಈಗ
ಯಾರು ನೀನು? ಯಾವೂರು?
ಎಲ್ಲಿಂದ ಬಂದೆ? ಯಾರು ನಿನ್ನ ತಂದೆ?
ಯಾರು ನಿನ್ನ ಬಳಗ? ಯಾಕಿಲ್ಲಿ ಬಂದೆ?
ಎಂದೆಲ್ಲಾ ಕೇಳಿದರೆ...

# ಎಲ್ಲಿದ್ದೆ ಏನಾಗಿದ್ದೆ?

ಅಣು ಕಣ ರಣ ಗುಣ
ಏನಾಗಿದ್ದೆ?

ಗಾಳಿ ಬೆಳಕು ಮಳೆ ಇಳೆ
ಏನಾಗಿದ್ದೆ?

ಗಿಡ ಮರ ಪಶು ಪಕ್ಷಿ
ಏನಾಗಿದ್ದೆ?

ಎಲ್ಲಿದ್ದೆ? ಹೇಗಿದ್ದೆ?
ಯಾಕೆ ಬಂದೆ? ಎಲ್ಲಿಗೆ ಹೋಗುವೆ?

ಕಣ್ಣು ಮುಚ್ಚಿದ್ದೆ ಬಿಚ್ಚಿದ್ದೆ
ಭೋರೆಂದು ಅತ್ತೆ ಅತ್ತೆ
ಸತ್ತೆ ಸತ್ತೆ ಮತ್ತೆ ಮತ್ತೆ...

ಬರುವೆ ಇರುವೆ ಹೀಗೆ ಇಲ್ಲಿ...
ಸುಮ್ಮಗೆ ಬಿಮ್ಮಗೆ
ತಿಳಿಯದೆ ಹೊಳೆಯದೆ



# ಹೊಸ ಹುಟ್ಟು

ಯುದ್ಧ ಶುರುವಾದಾಗ
ಕೊಳದಲ್ಲಿ ತಾವರೆಯ
ಹೂವುಗಳು ಅರಳಿದ್ದವು

ಯುದ್ಧ ಮುಗಿದ ದಿನ
ಹೆಣಗಳು ತೇಲುತ್ತಿದ್ದವು

ಚರಮಗೀತೆ ನುಡಿಸಲೂ
ಮಂದಿ ಉಳಿದಿಲ್ಲ
ಎಲ್ಲವೂ ಹೊಸದಾಗಿ ಹುಟ್ಟಬೇಕು
ಮನುಜರೂ...



# ಎಲ್ಲಾ ಒಂದೇ

ಇವರು ಸಿರಿವಂತರು
ಇವರು ಬುದ್ಧಿವಂತರು
ಇವರು ಬಲಾಢ್ಯರು

ಇವರು ಮೂರ್ಖರು
ಇವರು ಮೂಢರು
ಇವರು ಖೂಳರು

ಇವರು ದುರ್ಬಲರು
ಇವರು ದಮನಿತರು
ಇವರು ದೀನರು ದರಿದ್ರರು

ಇವರು ಭಕ್ತರು
ಇವರು ವಿರಕ್ತರು
ಇವರು ಮುಕ್ತರು

ಸದ್ಗುಣ ದುರ್ಗುಣ
ರಣ ಗಣ ಕಣ
ಕಣ್ಣು ಮುಚ್ಚಲು
ಮಣ್ಣು ಸೇರಲು ಎಲ್ಲಾ ಒಂದೇ...

# ಯಾರಿಗೆ ಯಾರುಂಟು?

ತಂದೆ ಯಾರು? ಗೊತ್ತಿಲ್ಲ
ತಾಯಿ ಯಾರು? ಗೊತ್ತಿಲ್ಲ
ಬಂಧುಗಳಿರುವರೆ? ಗೊತ್ತಿಲ್ಲ
ದೇವರು ದಿಂಡರು? ಗೊತ್ತಿಲ್ಲ
ಧರ್ಮ ಯಾವುದು? ಗೊತ್ತಿಲ್ಲ

ಸಕಲೆಂಟು ಜಾತಿ ಮತ ಭಾಷೆಯ
ಮಂದಿ ದಂಡಾಗಿ ಬಂದು
ದುಂಡಾಗಿ ನಿಂತು ಸರ್ವಾಂಗ ಶೋಧಿಸಿ
ಭೇದಿಸಿ ಛೇದಿಸಿ
ಊಹಿಸದಾದರು ಗೊತ್ತಿಲ್ಲ!

ಇವ ನಮ್ಮವನೆ ಗೊತ್ತಿಲ್ಲ
ಇವ ತಮ್ಮವನೆ ಗೊತ್ತಿಲ್ಲ
ಬದುಕುಳಿದಿರುವನೆ ಗೊತ್ತಿಲ್ಲ
ತೀರಿರುವನೆ ಗೊತ್ತಿಲ್ಲ

ನಿಂತರು ನಡೆದರು
ಪಿಸುನುಡಿಯಾಡಿ ಮಾತಲೆ ಇರಿದರು
ಹೊತ್ತಿಲ್ಲ – ಗೊತ್ತಿಲ್ಲ!

# ನನಗೆ ನಾನೇ ತಿಳಿಯ ಹೇಳುವೆ...

ಬೆಳಗಾಗಿ ನೀನೆದ್ದು
ಫೋನು ತೆರೆಯ ಬೇಡ
ವಾಟ್ಸಪ್ ಫೇಸ್ಬುಕ್ ಇತ್ಯಾದಿ
ನೋಡಬೇಡ...
ವಿಷವ ಉಣಿಸಿರುವುದನ್ನೋ
ಬೆಂಕಿಯ ಹಚ್ಚಿರುವುದನ್ನೋ
ಫಾರ್ವರ್ಡ್ ಮಾಡಬೇಡ!

ಬೆಳಗಾಗಿ ನೀನೆದ್ದು
ಹೂಗಳ ಬಿಡಿಸಿ ರಂಗೋಲೆ ಎಳೆದು
ಗಿಡಕ್ಕೆ ನೀರೆರೆದು
ಬೆಕ್ಕಿಗೆ ಹಾಲು ನಾಯಿಗೆ ಬನ್ನು
ಹಕ್ಕಿಗೆ ಕಾಳು ಹಾಕು...

ಹೊಂಬಣ್ಣದ ಸೂರ್ಯನಿಗೆ ಮುತ್ತಿಟ್ಟು
ದೇವಕಣಗಿಲೆಯ ಘಮ ಹೀರುತ್ತಾ
ನಾಕು ಹೆಜ್ಜೆ ಹಾಕು ಎದುರಾದವನಿಗೆ
ಬುದ್ಧ ನಗೆಯನ್ನು ಫಾರ್ವರ್ಡ್ ಮಾಡು...

ಮನೆಗೆ ಮರಳಿ ಬಿಸಿಬಿಸಿ
ಕಾಫಿಯನ್ನೋ ಟೀಯನ್ನೋ
ಗಂಟಲಿಗೆ ಸುರಿದುಕೊಂಡು
ಸಗ್ಗವನ್ನೇ ಕಾಣು...
ಎಂದು ನನಗೆ ನಾನೇ ತಿಳಿಯ ಹೇಳುವೆ!





# ನೀನೆಂತು ತಿಳಿವೆ?

ಥೋ ಇದು ಗಂಡೂ ಅಲ್ಲ ಹೆಣ್ಣೂ ಅಲ್ಲ
ಎಂದು ಮಾತಿನಲ್ಲೇ ಸುಟ್ಟರೂ
ಕೈ ಬಿಟ್ಟರೂ ಅವ್ವ ಹಾಲನೆರೆದು
ಮುತ್ತು ಕೊಟ್ಟಳು
ಕೆನ್ನೆಗೊಂದು ಬೊಟ್ಟು ಇಟ್ಟಳು

ತುರುಬು ಕಟ್ಟಿ ಹೂವ ಮುಡಿದು
ಸೀರೆ ಉಟ್ಟು ಬಳೆಯ ತೊಟ್ಟೆ
ಮೂರು ದಾರಿ ಕೂಡುವಲ್ಲಿ
ಬಿಟ್ಟು ಬಿಟ್ಟರು...

ನೀರನೆರೆದು ಮದ್ದು ಅರೆದು
ಮುದ್ದೆ ತಿರುವಿ ಸೋಸಿ ಕಾಸಿ ಬೀಸಿ
ತಗ್ಗಿ ಬಗ್ಗಿ ತೇದುಕೊಂಡೆ
ತಬ್ಬಿಕೊಂಡವು ಎಳೆಯ ಮಕ್ಕಳು

ಮೊನ್ನೆ ಅಜ್ಜಿ... ಎಂದು ಕರೆದು
ಹರೆಯದ ಹುಡುಗಿಯೊಬ್ಬಳು ಕೈ ಹಿಡಿದು
ರಸ್ತೆ ದಾಟಿಸಿದಳು

ಬಸ್ಸಿನಲ್ಲಿ ಪಕ್ಕ ಬಂದು ಕೂತ
ಬಳಲಿದ ಹೆಣ್ಮಗಳು ಮಗುವನು
ಕೈಗಿತ್ತು ಹೆಗಲಿಗೆ ತಲೆಕೊಟ್ಟಳು

ಅಪರೂಪಕ್ಕೆ ತೊಡೆತಟ್ಟಿ ನಿಲ್ಲುವೆ
ಚದುರಿ ಹೋಗುವವರು ಪುಂಡು ಮಕ್ಕಳು

ಲೋಕದ ಬಾಯಿಗೆ ಈಡಾಗಿ ಹಣ್ಣಾಗಿರುವೆ
ಆದರೂ ಹೆಣ್ಣೆಂದುಕೊಂಡು
ಇರುವೆ ಪೊರೆವೆ ದುಡಿವೆ ಮಡಿವೆ!
ಮರಳಿ ಬಂದೆನಾದರೆ ಹೆಣ್ಣು ಜನುಮ
ಕೊಡಲೆಂದು ಇಲ್ಲದ ದೇವರ
ಕರೆವೆ ಮೊರೆವೆ!

ಲೋಕವೇ ಹೆಣ್ಣಲ್ಲದ ಗಂಡಲ್ಲದ
ಜೀವದ ಕಷ್ಟ ನೀನೆಂತು ತಿಳಿವೆ?

# ಅಂದೇ ನನ್ನ ಜನುಮ ದಿನ

ಅಂಬಲಿ ಸಿಕ್ಕಿದ್ದೇ
ಅಂಬೇಡ್ಕರರನ್ನೇ ಮರೆತಿರಿ

ಸೂರು ಕಂಡಿದ್ದೇ
ಮೈಮರೆತು ನಿದ್ದೆ ಹೋದಿರಿ

ವಿದ್ಯೆ ವಿನಯ ಸಿದ್ಧಿ ಸಮ್ಮಾನ
ಪಡೆಯಲೇನು ಮಾಡಿದಿರಿ?

ರಥದ ಚಕ್ರಗಳು ತುಕ್ಕು ಹಿಡಿದಿವೆ
ಹೊಕ್ಕು ನೋಡಿರಿ ಸೋದರರೇ

ಕೆಟ್ಟಗೆ ನೋಡಿದನೇ
ಕೆಟ್ಟಗೆ ಆಡಿದನೇ
ಕೆಟ್ಟದು ಮಾಡಿದನೇ
ಕಂಗೆಡದಿರಿ
ಸಟೆಯನು ಸುಟ್ಟು
ದಿಟವನು ಮೆರೆಯಿರಿ

ಕಟ್ಟಕಡೆಯವ
ನೆಟ್ಟಗೆ ನಿಂತ ದಿನ
ಬೇಡದೆ ನೀಡಿದ ದಿನ
ಶೋಕವ ನೀಗಿದ ದಿನ
ಲೋಕವ ತಿದ್ದಿ ತೀಡಿ
ತನಗೆ ತಾ ಬೆಳಕಾಗಿ
ತಥಾಗತನಂತೆ
ಜಗವ ಸೋಕಿ ತಾಕಿದ ದಿನ
ಅಂದೇ ನನ್ನ ಜನುಮ ದಿನ
ಅಂದೇ ನಿಮ್ಮ ಜನುಮ ದಿನ!

# ಇಲ್ಲ... ಇಲ್ಲ

ಹಲವು ದೇವರುಗಳು
ಒಬ್ಬರಿಗೂ ನಡೆದುಕೊಳ್ಳಲಿಲ್ಲ!

ಹಲವು ಧರ್ಮಗಳು
ಒಂದನಾದರೂ ಅನುಸರಿಸಲಿಲ್ಲ!

ಹಲವು ಆಚಾರಗಳು
ಒಂದನಾದರೂ ಪಾಲಿಸಲಿಲ್ಲ!

ಹಲವು ವಿಚಾರಗಳು
ಒಂದನಾದರೂ ಜೀವಿಸಲಿಲ್ಲ!

ಋತುಗಳು ಬಂದವು ಹೋದವು
ಕತ್ತಲು ಬೆಳಕಿನಾಟದಲಿ
ಎದೆಯ ದೀಪ ಹೊಯ್ದಾಡಿತು
ಬಾಯಾರಿತು ಆರಿತು
ಸಣ್ಣಗೆ ಹೊಗೆ ನಗೆ ಬೀರಿತು!



# ತೇಲಿ ಹೋಗಿರುವೆ...

ಅಗಲುವುದೇನೋ ಖಚಿತ
ಮತ್ತೆ ಭೇಟಿ ಆಗುವೆವೋ ಖಾತರಿಯಿಲ್ಲ

ಅಲ್ಲಿರಬಹುದೆಂದು ಆಗಸಕ್ಕೆ
ಕೈ ಚಾಚಿದೆ ನಕ್ಷತ್ರಗಳು
ಸಿಕ್ಕವೇ ಹೊರತು ನಿನ್ನ ಸುಳಿವಿಲ್ಲ

ಇಲ್ಲಿರಬಹುದೆಂದು ಕಡಲಿನಾಳಕೆ
ಇಳಿದೆ ಮುತ್ತುಗಳು
ಸಿಕ್ಕವೇ ಹೊರತು ನಿನ್ನ ಸುಳಿವಿಲ್ಲ

ಬೂದಿಯಾಗಿರುವೆ ತೇಲಿ ಹೋಗಿರುವೆ
ಹರಡಿ ನೆನಪಿನ ಸುಗಂಧ



## ಅಳಿಯುವೆನೋ ಉಳಿಯುವೆನೋ ನೋಡಿಯೇ ಬಿಡುವೆನು....

ಬೀಸಿ ಬರಲೆಂದು ಬಿರುಗಾಳಿ
ನಾನಾಗಿಯೇ ಕರೆದಿರುವೆನು
ಎದೆಯುಬ್ಬಿಸಿ ಎದುರಾಗುವೆನು
ಏನಾದರಾಗಲಿ? ನೋಡಿಯೇ ಬಿಡುವೆನು

ಬಂದಂತೆಯೇ ಮರಳಿದರೆ
ಬಾಗುವೆನು ಬೆಳೆಯುವೆನು
ಎತ್ತಿಕೊಂಡೊಯ್ಯುವುದೋ
ಬಿಸುಡುವುದೋ ಸೆಣಸಾಡುವೆನು
ಅಳಿಯುವೆನೋ ಉಳಿಯುವೆನೋ
ನೋಡಿಯೇ ಬಿಡುವೆನು

ಹಾಡುಹಕ್ಕಿಯು ತಾನು
ನೆನೆಯುವುದೊಮ್ಮೆ ಕಾನು
ಕರೆಯುವುದೊಮ್ಮೆ ಬಾನು
ಹಾಡೇ ಹಕ್ಕಿಯಾಗಿ
ಹಾರಲು ಬಿಡುವೆ ಇನ್ನೇನು...



# ಹಕ್ಕಿ – ಹೂವು

ಇದೋ ಈ ಹೂವು
ಭೂಮಿಯ ನಗು
ಅದೋ ಆ ಹಕ್ಕಿ
ಆಕಾಶದ ಬೆರಗು

ಹೂವು ಅರಳುವುದು
ಹಕ್ಕಿ ಹಾಡುವುದು

ಹಾಡಿಗೆ ಹೂತು ಮರ
ಮೈದುಂಬಿ ಹಣ್ಣಾಗುವುದು

ಹಣ್ಣು ಮಣ್ಣು ಸೇರಿ
ಗಿಡದ ಕಣ್ಣರಳುವುದು

ಮಣ್ಣೊಳಗೆ ಕಣ್ಣೊಡೆಯಲು
ಕಾದಿವೆ ನೂರು ಬಣ್ಣಗಳು!

ಬಾನೊಳಗೆ ರೆಕ್ಕೆ ಸುಟ್ಟು
ಮಿನುಗಿವೆ ಸಾವಿರ ದೀಪಗಳು!





**ಕವನ ಸಂಕಲನಗಳು**

ನಾ ಬರುತ್ತೇನೆ ಕೇಳು (1987)
ಚಂದ್ರನನ್ನು ಕರೆಯಿರಿ ಭೂಮಿಗೆ (1991)
ಹೊಳೆ ಮಗಳು (1996)

**ಆಕಾಶ ಮಲ್ಲಿಗೆ**

ಆಯ್ದ ನೂರು ಕವನಗಳು(2000)
ಜಾತ್ರೆಯಲ್ಲಿ ಶಿವ (2002)
ಕಾಡುಲಿಲ್ಲಿ ಹೂವುಗಳು:
ಈ ವರೆಗಿನ ಕವನಗಳು (2006)
ದರುಶನ (2009)

**ಹಳ್ಳಿಯ ದಾರಿ**

ಆಯ್ದ 50 ಕವನಗಳು (2011)
ಕರುಣಾಳು (2016)
ದೇವರಿಗೆ ಹೋದೆವು (2018)
ಕಡೇ ಮಾತು (ರೈತಗೀತೆ-2021)

**ಕಾದಂಬರಿ:**

ಸ್ತ್ರೀ ಲೋಕ (1996, 2011, 2020)

**ಲೇಖನಗಳ ಸಂಗ್ರಹ**

ಹೂ ಮನಸ್ಸಿನ ಹೋರಾಟಗಾರ ಮತ್ತು
ಇತರ ಲೇಖನಗಳು (2011)

**ಸಂಪಾದಿತ ಕೃತಿ:**

ಮುಡಿ ಮಲ್ಲಿಗೆ (ಮಹಿಳಾ ಸಾಹಿತ್ಯ ಸ್ಪಂದನ-1992)
ಕವಿತೆ 1997 (ಕರ್ನಾಟಕ ಸಾಹಿತ್ಯ ಅಕಾಡೆಮಿಗಾಗಿ)

**ಕತೆಗಳು:**

ಅಜ್ಜಿ ಕರೆದ ಹಾಗಾಯ್ತು (2022)

**ಸಹ ಸಂಪಾದನೆ:**

ಹಣತೆ (ಜಿ.ಎಸ್.ಎಸ್. ಅಭಿನಂದನ ಗ್ರಂಥ)
ಸುವರ್ಣ ಕಾವ್ಯ (ಸುವರ್ಣ ಕರ್ನಾಟಕ ಕಾವ್ಯ ಸಂಪುಟ 2006)
ಇರುವಂತಿಗೆ (ವೈದೇಹಿ ಗೌರವ ಗ್ರಂಥ)

**ಕೆಲವು ಪ್ರಮುಖ ಪುರಸ್ಕಾರಗಳು**

ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ (2014)
ಡಿ.ಎಸ್. ಕರ್ಕಿ ಕಾವ್ಯ ಪುರಸ್ಕಾರ
ಪು.ತಿ.ನ. ಕಾವ್ಯ ಪ್ರಶಸ್ತಿ
ಮಾಸ್ತಿ ಕಾವ್ಯ ಪುರಸ್ಕಾರ
ಮಧುರ ಚೆನ್ನ ಕಾವ್ಯ ಪುರಸ್ಕಾರ
ಕಿ.ರಂ. ಕಾವ್ಯ ಪುರಸ್ಕಾರ
ಕನ್ನಡ ಸಾಹಿತ್ಯ ಪರಿಷತ್‌ನ ಮನುಶ್ರೀ ರಾಷ್ಟ್ರೀಯ ಪ್ರಶಸ್ತಿ
ಎಂ.ಕೆ. ಇಂದಿರಾ ಪ್ರಶಸ್ತಿ
ಬಿ.ಹೆಚ್. ಶ್ರೀಧರ ಸಾಹಿತ್ಯ ಪ್ರಶಸ್ತಿ

**ಕವಿತೆ**

ಮೂಳೆ ಮಾಂಸ ಮಜ್ಜೆ
ರಸ ಗಂಧ ಸ್ಪರ್ಶ ರೂಪ ತಳೆದು
ಹೊಳೆದು ನಿಂತ ಕವಿತೆಯೇ....

ಅರೆ ಇದೇನಿದು?
ಕಣ್ಣಲ್ಲಿ ಮಡುಗಟ್ಟಿದ ಕ್ಷೋಭೆ
ಕದಪುಗಳು ಕಾದು ಕೆಂಪಗೆ
ತುಟಿ ನಡುಗಿದೆ ಕಂಠ ಬಿಗಿದಿದೆ
ಹೂ ಬಿರಿವ ಸದ್ದನಾಲಿಸಿದೆ ಕಿವಿ
ತಲ್ಲಣಿಸಿ ಎದೆ ನವರಸಗಳಲ್ಲಿ ತೇಲಿ
ಮುಳುಗಿ ತುಯ್ಯುತಿದೆ-
ಹಿಡಿ ಹೃದಯ ಬಡಿಯುತಿದೆ
ನರನಾಡಿ ಮಿಡಿದು
ಹುರಿದುಂಬಿಸಿ ಪ್ರಾಣವಾಯು
ಸಂಚರಿಸಿಹಳು ರಕ್ತದೇವತೆ!
ಲಜ್ಜೆ ಸಂಕೋಚಗಳೇ ಅವಳ ತ್ರಾಣ ಪ್ರಾಣ



ಸಕಲ ಜೀವಸಂಕುಲವ
ತಬ್ಬಿ ನಿಂತಿವೆ ಕೈಗಳು
ಕಾಲುಗಳೋ ಬೇರೂರಿ ನಿಂತು
ತೊಟ್ಟಿವೆ ನಕ್ಷತ್ರಗಳು!

ನಿಂತು ನೋಡಿದೆ ಹಾಡಿದೆ
ನೀ ವಿಶ್ವರೂಪಿ
ಮೈತ್ರಿ- ಕರುಣೆಯಂತೆ ನೀ ವಿಶ್ವವ್ಯಾಪಿ




ಎಚ್.ಐ.ಜಿ. ೫, ಕಲ್ಲಳ್ಳಿ, ವಿನೋಬ ನಗರ
ಶಿವಮೊಗ್ಗ - ೫೭೭೨೦೪
ದೂ : ೯೪೮೧೩ ೫೧೦೭೯

ಬೆಲೆ : ರೂ. 60/-